


# ಸಪ್ತಗಿರಿ

ಮೇ 1983



ತಿರುಮಲೆ ತಿರುಪತಿ ದೇವಸ್ಥಾನಗಳ ಮಾಸ ಪತ್ರಿಕೆ



ಕಾಯವೆಂಬ ಘಟಕ್ಕೆ ಚೈತನ್ಯವೇ ಸಯಿಧಾನ
ಸಮತೆಯೆಂಬ ಜಲ ಕರಣಾದಿಗಳೇ ಶ್ರವಣ
ಜ್ಞಾನವೆಂಬಗ್ನಿಯನಿಕ್ಕಿ
ಮತಿಯೆಂಬ ಸಟ್ಟುಗದಲ್ಲಿ ಪಾಕಕ್ಕೆ ತಂದು
ಭಾವದಲ್ಲಿ ಕುಳ್ಳಿರಿಸಿ ಪರಿಣಾಮದೋಗರವ ನೀಡಿದರೆ
ಕೂಡಲ ಸಂಗಮ ದೇವಂಗೆ ಆರೋಗಣೆಯಾಯಿತ್ತು

— ಬಸವಣ್ಣನವರು.



ಗೌರವ ಸಂಪಾದಕರು:
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ:
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ:
ಬಿ. ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ:
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ- ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. — ಸಂ॥

ಸಂಪುಟ ೧೪] ಮೇ ೧೯೮೪ [ಸಂಚಿಕೆ ೧೨

# ವಿಷಯಸೂಚಿ



ಮುಖಚಿತ್ರ: ಗರುಡಾಳ್ವಾರ್ – ಅಲಿಪಿರಿ, ಒಳಚಿತ್ರಗಳು: ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ ದೃಶ್ಯಗಳು. ಹಿಂಬದಿಯಲ್ಲಿ: ಶ್ರೀ ಲಕ್ಷ್ಮೀ ನರಸಿಂಹಸ್ವಾಮಿ.




ಮಂಗನಿಂದ ಮಾನವನಾದ ಎಂಬುದು ಡಾರ್ವಿನ್ನನ ವಿಕಾಸವಾದ ಮಾತು. ಮಾನವನಿಂದ ದೇವಮಾನವನಾಗಬಲ್ಲ ಎಂಬುದು ಅರವಿಂದರ ಪ್ರವಾದದ ಘೋಷಣೆ. ದೇವ ಮಾನವನಾಗುವ ಹಾದಿಯಲ್ಲಿ ಮಾನವ ನಡೆದಿರುವುದನ್ನು ದಿನ ದಿನವೂ ನಾವು ಕಾಣುತ್ತಲೇ ಇದ್ದರೂ, ಆಗಾಗ ಇತಿಹಾಸ ಚಕ್ರ ಹಿಂದಿರುಗುವಂತೆ ತೋರಿ ಬಂದು, ಮಾನವನಲ್ಲಿನ ಮಂಗಮನ ಪ್ರಕಾಶಗೊಳ್ಳುವುದನ್ನು ನೋಡುತ್ತಿರುತ್ತೇವೆ. ಜಾತಿ ಪಂಥ ವರ್ಣ ವ್ಯತ್ಯಾಸಗಳು ಈ ಮಂಗ ಮನಕ್ಕೆ ಇಂಗುತಿನಂತೆ ರುಚಿ ನೀಡಿ ಉದ್ರೇಕಗೊಳಿಸುತ್ತದೆ. ಸನಾತನ ಧರ್ಮದಲ್ಲಿನ ಪ್ರಸ್ಥಾನತ್ರಯಗಳಲ್ಲಿ ಒಂದಾದ ಭಗವದ್ಗೀತೆಯಲ್ಲಿ ಪರಮಾತ್ಮ ಘೋಷಿಸಿದ್ದಾನೆ.

ಚಾತುರ್ವರ್ಣ್ಯಂ ಮಯಾ ಸೃಷ್ಟಂ
ಗುಣಕರ್ಮ ವಿಭಾಗಶಃ

ಅವನೇ ಸೃಜಿಸಿದ ನಾಲ್ಕು ವರ್ಣಗಳಿಗೆ ಅವನೇ ನೀಡಿದ ಆಧಾರ ಗುಣಕರ್ಮಗಳು ಎಂಬುದನ್ನು ಮರೆತು ಸಮಾಜದಲ್ಲಿ ಜಾತಿಪಂಥಗಳ ಗಾಳಿ ತೂರದ ಕೋಣೆಗಳನ್ನಾಗಿ ಮಾಡಿಕೊಂಡಿರುವ ಹಲವು ಆಸಕ್ತ ವ್ಯಕ್ತಿ ಗುಂಪುಗಳ ಮೇಲರಿಮೆಯಿಂದ ಸಾಮಾಜಿಕ ಅವಗಢಗಳುಂಟಾಗಿ ದೈನಂದಿನ ಜೀವನದ ಲಯದಲ್ಲಿ ಅಪಶ್ರುತಿಗಳು ಆಗಾಗ ಅವ್ಯವಸ್ಥೆಯ ಅಲೆಗಳನ್ನು ಎಬ್ಬಿಸುತ್ತಿದ್ದದ್ದು ಕಂಡು ಬಂದರೂ, ಸಮಾಜ ಪುರುಷ ಅದನ್ನು ಅದುಮಿ ಮತ್ತೆ ಯಥಾಪ್ರಕಾರದ ಪ್ರಶಾಂತತೆಯನ್ನುಂಟುಮಾಡಿರುವುದನ್ನು ನೋಡಬಹುದು.

ಅಸಲಿಗೆ 'ಏಕಂ ಸತ್'' ಆಗಿರುವಾಗ ಈ ಜಾತಿ ಪಂಥ ಮತಗಳ ಕೊಂಕಣ ಸುತ್ತುವಿಕೆಯೇಕೆ? ಎಂಬ ಪ್ರಶ್ನೆ ಬರದಿರದು. ಕನಕನಿಗಾಗಿ ಕಿಂಡಿಯಲ್ಲಿ ಕಂಡು ಬಂದ ಕೃಷ್ಣ ತಾನೇ ನಿರ್ಮಿಸಿದ ವರ್ಣ ಜಾತಿಗಳನ್ನು ದೂರ ಮಾಡಿ ಭಕ್ತರಿಗೆ ಒಲಿಯುವೆನೆಂದು ಹೇಳುವಂತೆ ಇನ್ನೂ ದರ್ಶನ ನೀಡುತ್ತಲೇ ಇದ್ದಾನೆ. ಎಲ್ಲ ವಾದಗಳನ್ನು ಮೀರಿ ಎಲ್ಲರಿಂದಲೂ ಏಕತ್ರವಾಗಿ ಪೂಜೆಗೊಳ್ಳುವ ಕಲಿಯುಗದ ಪರದೈವ ಶ್ರೀನಿವಾಸ ಇದ್ದಾನೆ. ಇತಿಹಾಸದ ಪುಟಗಳಲ್ಲಿ ಶ್ರವಣಬೆಳಗೊಳದ ಶಾಸನಗಳು ಇನ್ನೂ ತಮ್ಮ ಸಂದೇಶವನ್ನು ಹೊತ್ತು ನಿಂತಿವೆ. 'ಯಂ ಶೈವಾ ಸಮುಪಾಸತೇ...' ವಿಜಯನಗರದರಸು ಬುಕ್ಕರಾಯ ತಿರುಮಲೆಯ ತಾತಯ್ಯನವರ ಸನ್ಮುಖದಲ್ಲಿ ಜೈನ ಹಾಗೂ ಭಕ್ತರಲ್ಲಿ ಭೇದವಿಲ್ಲವೆಂದು ನಿರ್ಣಯಿಸಿ ಪರಸ್ಪರ ಸೌಹಾರ್ದಕ್ಕೆ ಶಾಸನದ ಬುನಾದಿಯನ್ನೇ ಹಾಕಿದ್ದಾನೆ. ಈಚೆಗೆ ಧರ್ಮದ ಹಲವು ಪಂಥಗಳಲ್ಲಿ ಹಿರಿಯರೂ ಜ್ಞಾನವೃದ್ಧರೂ ಆದ ಅನೇಕ ಮಠಾಧಿಪತಿಗಳು 'ವೇದಗಳೆಲ್ಲೆಲ್ಲೂ ಅಂತ್ಯಜರೆಂಬುವುದನ್ನು ಹೇಳಿಲ್ಲವಾಗಿ ಎಲ್ಲರೂ ಸನಾತನ ಧರ್ಮದ ಮುಖ್ಯ ಸ್ರೋತದಲ್ಲಿ ನಡೆಯತಕ್ಕವರೇ ಆಗಿದ್ದಾರೆ' ಎಂದು ಸಾಮೂಹಿಕವಾಗಿ ಘೋಷಿಸಿದ್ದಾರೆ. ಪುರಾಣೇತಿಹಾಸದಲ್ಲಿಯಂತೂ ಈ ಭಾವ ಇನ್ನೂ ಸ್ಪಷ್ಟ. ಧರ್ಮವ್ಯಾಧನ ಕಥೆ, ಹುಟ್ಟನ್ನೂ ಕರ್ಮವನ್ನೂ ಮೀರಿ ಮಾನವ ಬೆಳೆಯಬಲ್ಲ ಆಸಕ್ತಿ ಇದ್ದಲ್ಲಿ; ಎಂಬುದನ್ನು ಸಾರುತ್ತದೆ.

ಬೇಕಾದ್ದೂ ಅಷ್ಟೆ. ಸಾಮರ್ಥ್ಯ ಆಂತರಿಕವಾಗಿ ಇದೆ; ಆಸಕ್ತಿ ಇರಬೇಕು. ಸಮಚಿತ್ತದಿಂದ ಸುತ್ತಣ ಪರಿಸರವನ್ನು ನಿರೀಕ್ಷಿಸಿ ಅದರಲ್ಲಿ ತನ್ನನ್ನು ತಾನು ಕಂಡುಕೊಳ್ಳುವ ಆತ್ಮ ಜ್ಞಾನವಿರಬೇಕು. ಭಗವದ್ಗೀತೆಯಲ್ಲಿ ಭಗವಂತನೇ ಹೇಳಿಲ್ಲವೇ ;

" ಶುನಿಚೈವ ಶ್ವಪಾಕೇ ಚ ಪಂಡಿತಾ ಸಮದರ್ಶಿನ. ".

## ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿ. ತಿ. ದೇ. ಟ್ರಸ್ಟ್ ಬೋರ್ಡ್‌ನ ಛೇರ್ಮನ್ ಶ್ರೀ ಬಿ. ನಾಗಿರೆಡ್ಡಿ ಹಾಗೂ ಸದಸ್ಯ ಶ್ರೀ ಬಿ. ಸತ್ಯನಾರಾಯಣ ಅವರುಗಳು ರಾಜೀನಾಮೆ ಪತ್ರಗಳನ್ನು ಸಲ್ಲಿಸಲು, ಅವರುಗಳು ತಮ್ಮ ಅಧಿಕಾರಾವಧಿಯಲ್ಲಿ ತಿ. ತಿ. ದೇ. ಗಳಿಗೆ ಸಲ್ಲಿಸಿದ ಸರ್ವತೋಮುಖ ಅಭಿವೃದ್ಧಿ ಕಾರಕ ಸೇವೆಯನ್ನು ಶ್ಲಾಘಿಸಲಾಯಿತು.

* * * *

ಖಾಲಿಯಾದ ವಿವಿಧ ಸಂಸ್ಥೆಗಳ ಆಡಳಿತ ಮಂಡಳಿಗಳಿಗೆ ಕೆಳಕಂಡ ಸದಸ್ಯರನ್ನು ನಾಮಕರಣ ಮಾಡಲು ತೀರ್ಮಾನಿಸಲಾಯಿತು.

1) ವಿವಿಧ ಅನುಪಯೋಗಿ ವಸ್ತುಗಳ ಹರಾಜು ಸಮಿತಿ: ಶ್ರೀ ಮಾಧವರೆಡ್ಡಿ ಶ್ರೀ ರುದ್ರಯ್ಯ.

2) ಕಾರ್ಯಸಮಿತಿ: ಕಮೀಷನರ್ ಎಚ್. ಆರ್. ಅಂಡ್ ಸಿ. ಈ.

3) ತಿ. ತಿ ದೇ. ಕಾಲೇಜು ಆಡಳಿತ ಮಂಡಳಿ ಶ್ರೀಮತಿ ರಾಜಕುಮಾರಿ, ಶ್ರೀ ರುದ್ರಯ್ಯ

4) ಎಸ್. ಪಿ. ಡಬ್ಲ್ಯೂ. ಪಾಲಿಟೆಕ್ನಿಕ್ ವಿದ್ಯಾರ್ಥಿ ಆಯ್ಕೆಸಮಿತಿ: ಶ್ರೀ ರುದ್ರಯ್ಯ

### ಸಂಕ್ಷಿಪ್ತ ಸಮಾಚಾರ ದರ್ಶಿನಿ

ಪಶ್ಚಿಮ ಗೋದಾವರಿಯ ಶ್ರೀ ಬಾಲರಾಜ ಮಹರ್ಷಿಯವರು ತಿರುಪತಿಯಲ್ಲಿ ನಡೆಸುತ್ತಿರುವ ಉಚಿತ ಮೂಲಿಕಾ ಚಿಕಿತ್ಸಾ ಶಿಬಿರಗಳನ್ನು ವರ್ಷಕ್ಕೆ ಆರು ಬಾರಿಗೆ ಮೀರದಂತೆ ನಡೆಸಲು ಧನ ಸಹಾಯ ನೀಡಲು ತೀರ್ಮಾನಿಸಲಾಯಿತು.

× × ×

ಪೌರಾಣಿಕ ಶಿಕ್ಷಣ ಯೋಜನೆಯನ್ನು ಮತ್ತೂ ಎರಡು ವರ್ಷಗಳ ಕಾಲ ಮುಂದುವರಿಸಲು ತೀರ್ಮಾನಿಸಲಾಯಿತು. ಅದರ ಪ್ರಿನ್ಸಿಪಾಲ್ ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿಯವರಿಗೆ ಒಂದುವರ್ಷ ಅದೇ ಹುದ್ದೆಯಲ್ಲಿ ಮುಂದುವರೆಯವಂತೆ ಅವಕಾಶ ನೀಡಲು ತೀರ್ಮಾನಿಸಲಾಯಿತು.

× × ×

ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಸಲಹಾಮಂಡಳಿಗೆ ಮೂರು ವರ್ಷಗಳಿಗಾಗಿ
ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು (ಕಂಚಿ)
ಶ್ರೀ ಶ್ರೀ ವಿಶ್ವೇಶತೀರ್ಥ ಸ್ವಾಮಿಗಳು (ಪೇಜಾವರ)
ಶ್ರೀ ಶ್ರೀ ಶ್ರೀಮನ್ನಾರಾಯಣ ರಾಮಾನುಜಜೀಯರ್ ಸ್ವಾಮಿಗಳು (ನಡಿಗಡ್ಡ ಪಾಲೆಂ)
ಅವರುಗಳನ್ನು ನಾಮಕರಣ ಮಾಡಲು ತೀರ್ಮಾನಸಲಾಯಿತು.

× × ×

ಶ್ರೀ ವೆಂಕಟೇಶ್ವರ ಸ್ವಾಮಿಯ ದೇವಾಲಯವಿರುವ ತಿರುಮಲೆಯಲ್ಲಿ ಅತಿ ಶೀಘ್ರದಲ್ಲಿಯೇ ರೂ. 1. 20 ಕೋಟಿ ರೂಗಳ ಆಸ್ಥಾನ ಮಂಟಪವೊಂದು ನಿರ್ಮಾಣವಾಗಲಿದೆ.

ಆಂಧ್ರ ಪ್ರದೇಶ್ ಮುಜರಾಯಿ ಕಮಿಷನರ್ ಅವರ ಅಧ್ಯಕ್ಷತೆಯಲ್ಲಿ ನಡೆದ ತಿ. ತಿ. ದೇ. ಆಡಳಿತ ನಿರ್ವಾಹಕ ಮಂಡಳಿಯು, ಇಲ್ಲಿನ ಬೇಡಿ ಆಂಜನೇಯ ಸ್ವಾಮಿ ದೇವಾಲಯದ ಬಳಿ ನಾಲ್ಕು ಸಾವಿರ ಮಂದಿ ಕುಳಿತು ಕೊಳ್ಳಲು ಅನುಕೂಲವಾಗುವಂತೆ ಇರುವ ಒಂದು ಸಭಾಮಂಟಪವನ್ನು ನಿರ್ಮಿಸಲು ತೀರ್ಮಾನಿಸಿತು. ಇದರಿಂದ ಹೆಚ್ಚು ಹೆಚ್ಚು ಮಂದಿ ಯಾತ್ರಿಕರು ದೇವಸ್ಥಾನಗಳ ಹರಿಕಥೆ. ಸಂಗೀತಸಭೆ, ಭಜನೆ ಮುಂತಾದುವುಗಳಲ್ಲಿ ಭಾಗವಹಿಸಲು ಅನುಕೂಲವಾಗುವುದು.

× × ×

ಕರ್ನೂಲು, ಏಲೂರು, ಕಡಪ, ಒಂಗೋಲು, ಜಹೀರಾಬಾದ್, ತಿರುಚಾನೂರುಗಳಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನು ನಿರ್ಮಿಸುವ ಕಾರ್ಯ ಶೀಘ್ರದಲ್ಲಿಯೇ ಆರಂಭವಾಗಲಿದೆ. ಪೂರ್ವಗೋದಾವರಿಯ ಅಂತರ್ವೇದಿಯಲ್ಲಿನ ಸತ್ರವನ್ನು ತಿ. ತಿ. ದೇ. ನಿರ್ವಹಿಸಲು ತೆಗೆದು ಕೊಳ್ಳಲಾಗಿದೆ. ಇದರ ನಿರ್ವಹಣೆಯನ್ನು ಈ ಮೊದಲು ಅಲ್ಲಿನ ಶ್ರೀ ಲಕ್ಷ್ಮೀ ನರಸಿಂಹಸ್ವಾಮಿ ದೇವಸ್ಥಾನಕ್ಕೆ ಒಪ್ಪಿಸಲಾಗಿದ್ದಿತೆಂದು ನೆನೆಯಬಹುದು.

5) ಎಸ್. ವಿ. ಬಾಲಮಂದಿರ ಹಾಗೂ ಮೂಗ ಕಿವುಡರ ಪಾಠಶಾಲೆ: ಸಲಹಾ ಸಮಿತಿ ಶ್ರೀ ರುದ್ರಯ್ಯ.

* * *

ತಿ. ತಿ. ದೇ. ಉದ್ಯೋಗಿಗಳಿಗೆ ಅವರುಗಳ ಮೂಲ ವೇತನದ ಶೇ 10 ರಷ್ಟು ಯಾತ್ರಿಕ ಭತ್ಯವನ್ನು ನೀಡಲು ಸರಕಾರಕ್ಕೆ ಶಿಪಾರಸ್ ಮಾಡಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳಲ್ಲಿನ ಪ್ರಥಮ ದರ್ಜೆ ಗುಮಾಸ್ತರುಗಳ ವೇತನ ಶ್ರೇಣಿಯನ್ನು 530–850 ರಿಂದ 575–950 ಶ್ರೇಣಿಗೆ ಏರಿಸಲು ತೀರ್ಮಾನಿಸಲಾಯಿತು.

* * * *

ಹೊಸದೆಹಲಿಯ ಶ್ರೀ ವೆಂಕಟೇಶ್ವರ ಕಾಲೇಜಿನ ಆಡಳಿತ ಮಂಡಳಿಗೆ ಶ್ರೀಮತಿ ರಾಜಕುಮಾರಿ ಹಾಗೂ ಶ್ರೀ ಜಿ. ಮಾಧವರೆಡ್ಡಿ ಅವರುಗಳನ್ನು ನಾಮಕರಣ ಮಾಡಲು ತೀರ್ಮಾನಿಸಲಾಯಿತು.

* * * *

ನೆಲ್ಲೂರಿನ ಶ್ರೀ ವೆಂಕಟೇಶ್ವರ ಕಸ್ತೂರಿಬಾ ಕಲಾಕ್ಷೇತ್ರ ಭವನದ ಆಡಳಿತ ಮಂಡಳಿಗೆ ಶ್ರೀಮತಿ ರಾಜಕುಮಾರಿ ಹಾಗೂ ಶ್ರೀ ರುದ್ರಯ್ಯ ಅವರನ್ನು ನಾಮಕರಣ ಮಾಡಲು ತೀರ್ಮಾನಿಸಲಾಯಿತು.

* * * *

ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರ ಸ್ವಾಮಿ ದೇವಾಲಯದ ಸುತ್ತಣ ವಿವಿಧ ಮಾಲೀಕರುಗಳ ಜಮೀನುಗಳನ್ನು ದೇವಾಲಯದ ಕಾರ್ಯಗಳಿಗಾಗಿ ಸೂಕ್ತ ಪರಿಹಾರ ನೀಡಿ ಪಡೆಯಲು ತೀರ್ಮಾನಿಸಲಾಯಿತು.

* * * *

ಮುತ್ಯಾಲರೆಡ್ಡಿ ಪಲ್ಲಿಯಲ್ಲಿ ತಿ. ತಿ. ದೇ. ಉದ್ಯೋಗಿಗಳಿಗಾಗಿ ಬಾಡಿಗೆ – ಸ್ವಂತ – ಗೃಹ ನಿರ್ಮಾಣಯೋಜನೆಯಲ್ಲಿ 'ಡಿ' ರೀತಿಯ ಮನೆಗಳು 1 ರಿಂದ 40 ಹಾಗೂ 41 ರಿಂದ 80 ವರೆಗೆ ಪ್ರತಿಯೊಂದೂ 12–50 ಲಕ್ಷ ರೂಗಳ ವೆಚ್ಚದಲ್ಲಿ ನಿರ್ಮಿಸಲು ಆಡಳಿತ ಅನುಮತಿ ನೀಡಲು ತೀರ್ಮಾನಿಸಲಾಯಿತು.

* * * *

ತಿರುಮಲೆಯಲ್ಲಿ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರ ಕ್ಯಾಂಪ್ ಆಫೀಸ್ ನಿರ್ಮಾಣಕ್ಕಾಗಿ ಬಂದ ಟೆಂಡರುಗಳನ್ನು ಪರಿಶೀಲಿಸಿ ಅತಿ ಕಡಮೆಯದಾದ ಮೆ॥ ಭ. ರಾಮ ಹಾಗೂ ಕಂಪನಿಯವರ ಟೆಂಡರನ್ನು ಒಪ್ಪಲು ತೀರ್ಮಾನಿಸಲಾಯಿತು.

* * * *

ತಿ. ತಿ ದೇ. ಆಡಳಿತ ನಿರ್ವಾಹಕ ಮಂಡಳಿಯು ಕರ್ನಾಟಕದ ಉಡುಪಿಯಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನು 13. 10 ಲಕ್ಷ ರೂಗಳ ವೆಚ್ಚದಲ್ಲಿ ನಿರ್ಮಿಸಲು ತೀರ್ಮಾನಿಸಿದೆ. ಸ್ಥಳೀಯ

( 38ನೇ ಪುಟ ನೋಡಿ )

# ಸೇವಾಭಾವ ಶ್ರೀ ಹರಿದಾಸರು

ಕನ್ನಡನಾಡಿನಲ್ಲಿ ದಾಸಪಂಥವು ಮೈಸೂರು ಭಾಗದ ಅಚಲಾನಂದರಿಂದ ಸುಮಾರು ಒಂಬತ್ತನೆಯ ಶತಮಾನದಷ್ಟು ಹಿಂದೆಯೇ ರೂಪಗೊಂಡಿತೆಂದು ಹೇಳುವುದುಂಟು. ಮತ್ತೆ ಕೆಲವರು ಅಚಲಾನಂದರು ಹದಿಮೂರನೆಯ ಶತಮಾನದವರೆಂದೂ ಹೇಳುತ್ತಾರೆ. ಈ ಬಗ್ಗೆ ಸಂಶೋಧನೆ ನಡೆದು ಇನ್ನೂ ಹೆಚ್ಚು ಖಚಿತವಾದ ಆಧಾರಗಳು ಲಭ್ಯವಾಗಬೇಕಾಗಿದೆ.

ಹದಿಮೂರನೆಯ ಶತಮಾನದಲ್ಲಿ ಅವತರಿಸಿದ ದ್ವೈತ ಮತ ಸ್ಥಾಪಕರಾದ ಆನಂದತೀರ್ಥರು ವೇದ ಉಪನಿಷತ್ತುಗಳ ನಿಜವಾದ ಅರ್ಥವನ್ನು ತಿಳಿಸಲು ಮತ್ತು ಸಕಲ ಶ್ರುತಿಸ್ಮೃತಿಗಳ ಸಾರ ಸಂಗ್ರಹದಂತಿರುವ ಬಾದರಾಯಣರ ಬ್ರಹ್ಮಸೂತ್ರಗಳ ಸಾರಾಂಶವನ್ನೂ ನೀಡಲು, ಭಾಷ್ಯ ರಚನೆ ಮಾಡಿ ಸುಮಾರು 37 ಗ್ರಂಥಗಳನ್ನು ರಚಿಸಿದರು. ಈ ಅಮೂಲ್ಯ ಸಿದ್ಧಾಂತ ಗ್ರಂಥ ರಾಶಿಯನ್ನು ಸರ್ವ ಮೂಲ ಗ್ರಂಥಗಳೆಂದು ಸಂಬೋಧಿಸುವರು.

ಈ ದಾಸಸಾಹಿತ್ಯ ಪರಂಪರೆಗೆ ಶ್ರೀ ನರಹರಿ ತೀರ್ಥರು, ಶ್ರೀಪಾದರಾಜರು, ವ್ಯಾಸರಾಯರು ಮತ್ತು ವಾದಿರಾಜರೇ ಮೊದಲಾದ ಮಾಧ್ವ ಸಾಂಪ್ರದಾಯದ ಯತಿವರೇಣ್ಯರು ದಾರಿತೋರಿ, ಮಾರ್ಗದರ್ಶನ ನೀಡಿ, ಸ್ವತಃ ಪದ ಪದ್ಯಗಳನ್ನು ರಚಿಸಿ, ವೇದೋಕ್ತವಾದ ಮತ್ತು ಸ್ಮೃತಿ ಪುರಾಣಗಳಲ್ಲಿ ಮತ್ತು ಬ್ರಹ್ಮ ಸೂತ್ರ–ಭಾಷ್ಯ ಟೀಕೆ ಟಿಪ್ಪಣಿಗಳಲ್ಲಿ ಅಡಕವಾದ ತತ್ತ್ವರಹಸ್ಯಗಳೂ, ಪ್ರಮೇಯಗಳೂ, ಕನ್ನಡ ಭಾಷೆಯಲ್ಲಿ ಪಾಮರರಿಗೂ ದೊರೆಯುವಂತೆ ಪರಮಾನುಗ್ರಹ ಮಾಡಿದರೆಂಬುದನ್ನು ಎಲ್ಲರೂ ಒಪ್ಪಿಕೊಂಡಿದ್ದಾರೆ.

ಸರ್ವಸಂಗ ಪರಿತ್ಯಾಗಮಾಡಿ, ಐಹಿಕ ಸಕಲ ಸಂಪತ್ತನ್ನೂ ಸೂರೆಮಾಡಿ, ಪರಮ ವೈರಾಗ್ಯ ತಾಳಿ, ವ್ಯಾಸರಾಯರಿಂದ ಅಂಕಿತಪಡೆದು, ದಾಸ ಪಂಥದ ಆದ್ಯಪ್ರವರ್ತಕರೆನಿಸಿದ ಪುರಂದರ ದಾಸರಿಂದ ದಾಸಸಾಹಿತ್ಯವು ವ್ಯಾಪಕವಾಗಿ ರೂಪತಾಳಲಾರಂಭಿಸಿತು. ಮುಂದೆ ಕನಕದಾಸರೂ ಈ ಸಾಹಿತ್ಯವನ್ನು ವಿಪುಲವಾಗಿ ಬೆಳೆಸಿದರು. ಪುರಂದರದಾಸರು ಇನ್ನೂ ಪೂರೈಸಬೇಕಾಗಿದ್ದ ಭಾಗವನ್ನು ವಿಜಯದಾಸರು ಪೂರೈಸಿದರೆಂದೂ ಪ್ರತೀತಿ. ವಿಜಯದಾಸರ ಪರಮಾನುಗ್ರಹಕ್ಕೆ ಪಾತ್ರರಾದ ಗೋಪಾಲದಾಸರು, ವಿಜಯದಾಸರ ಆಜ್ಞಾನುಸಾರ ಗೋಪಾಲದಾಸರಿಂದ ಆಯುರ್ದಾನ ಪಡೆದ ಜಗನ್ನಾಥದಾಸರು, ಜಗನ್ನಾಥದಾಸರ ಪರಮಾನುಗ್ರಹಕ್ಕೆ ಪಾತ್ರರಾದ ಪ್ರಾಣೇಶದಾಸರು–ಇವರೆಲ್ಲರೂ ಸಾವಿರಾರು ಪದಪದ್ಯಗಳನ್ನು, ಕೀರ್ತನೆಗಳನ್ನು, ಸುಳಾದಿ ಉಗಾಭೋಗಗಳನ್ನು ರಚಿಸಿ ಭಕ್ತಿರಸದಿಂದ ತುಂಬಿದ ಅಪಾರ ಸಾಹಿತ್ಯವನ್ನು ನಿರ್ಮಾಣ ಮಾಡಿದ್ದಾರೆ

ಕನ್ನಡ ಸಾಹಿತ್ಯದಲ್ಲಿ ಶಿಲಾಶಾಸನಗಳ ತರುವಾಯದ ಘಟ್ಟ ಜೈನಸಾಹಿತ್ಯಕ್ಕೆ ಸಂದಿದೆ. ಜೈನ ಕವಿಗಳಾಗಿದ್ದ ಪಂಪನೇ ಮೊದಲಾದವರು ಪೌರಾಣಿಕ ಕಥಾನಕಗಳನ್ನು ಆಯ್ದುಕೊಂಡು ನೀತಿ ನಿರೂಪಣ ಮಾಡಿ, ಅಹಿಂಸಾತತ್ತ್ವ ಪ್ರತಿಪಾದನೆ ಮಾಡಿ, ಕನ್ನಡ ಸಾಹಿತ್ಯವನ್ನೂ ಸಮೃದ್ಧಿಗೊಳಿಸಿದರು. ಆ ತರುವಾಯದ ಅತಿಮಹತ್ವದ ಘಟ್ಟವೇ ಶರಣ ಸಾಹಿತ್ಯಮತ್ತು ದಾಸಸಾಹಿತ್ಯಕ್ಕೆ ಸೇರಿದುದು. ಈ ಉಭಯಸಾಹಿತ್ಯಗಳೂ ಮುಖ್ಯತಃ ಭಕ್ತಿ ಪ್ರಪತ್ತಿಗಳಿಗೆ, ಸಾಧನಮಾರ್ಗಕ್ಕೆ ಮೀಸಲಾಗಿವೆಯೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಈ ಸಾಹಿತ್ಯವು ಅನುಭಾವ ಪ್ರಜ್ಞಾದೀಪ್ತವಾಗಿದೆಯೆಂದು ಹೇಳಬಹುದಾಗಿದೆ. ಈ ಉಭಯ ಸಾಹಿತ್ಯಗಳೂ ವೇದ – ಉಪನಿಷತ್ತುಗಳ ಮಹಾವಾಕ್ಯಗಳನ್ನೇ ಆಧಾರವಾಗಿಟ್ಟುಕೊಂಡಿದ್ದರೂ ಶಾಂಕರ – ಮಾಧ್ವರುಗಳ ಅರ್ಥವೈಖರಿಗಳನ್ನು ಪ್ರತಿಪಾದಿಸುವ ಎರಡು ಮಹಾ ಶಾಖೆಗಳೆಂಬುದು ಕಾಣದೆಯಿರದು.

ಯಾವುದೇ ಒಂದು ಏರ್ಪಾಡು, ವ್ಯವಸ್ಥೆ ಸಂಘ, ಸಂಸ್ಥೆ, ಸಮಾಜ, ಸರಕಾರ ಕ್ರಮಬದ್ಧವಾಗಿ ವರ್ತಿಸಿ ತನ್ಮೂಲಕ ಆನಂದ ರೂಪವಾದ ಸಫಲತೆಯನ್ನು ಸಾಧಿಸಬೇಕಾದರೆ ಒಂದು ಶಿಸ್ತನ್ನು ಹೊಂದಿರಬೇಕಾಗುವುದು. ಅದನ್ನೇ 'ಅಥಃ ಪೌರುಷಶಿಷ್ಟಃ' ಎಂದು ವೇದಗಳು ಪ್ರತಿಪಾದಿಸಿವೆ. ಒಂದು ವ್ಯವಸ್ಥೆಯು 'ಸುವ್ಯವಸ್ಥೆ' ಎಂದೆನಿಸಬೇಕಾದರೆ ಆ ವ್ಯವಸ್ಥೆಯಲ್ಲಿ ಆಜ್ಞೆ ಮಾಡುವ, ಆಜ್ಞೆಯನ್ನು ಪಾಲಿಸಿದರೆ ಅದರಿಂದ ಸಂತುಷ್ಟನಾಗಿ ಅನುಗ್ರಹಿಸುವ ಮತ್ತು ಆಜ್ಞೆಯನ್ನು ಮೀರಿದರೆ ಅಂಥವರನ್ನು ದಂಡಿಸುವ ಒಬ್ಬ ನಿಯಾಮಕನಿರಬೇಕು. ಅವನ ಆಜ್ಞೆಯನ್ನು ಜಾರಿಗೆ ತರುವ ಅಧಿಕಾರಿ ವರ್ಗವಿರಬೇಕು. ಅಧಿಕಾರಿಗಳಲ್ಲಿ ಸ್ಥಾನಮಾನಗಳಿರಬೇಕು. ಅವರವರ ಶಕ್ತಿ ಸಾಮರ್ಥ್ಯಗಳ ವ್ಯಾಪ್ತಿ ಮತ್ತು ಇತಿಮಿತಿಗಳು ನಿಷ್ಕೃಷ್ಟವಾಗಿರಬೇಕು. ಇದರಿಂದ ಪ್ರಜಾಕೋಟಿಗೆ ಅಂದರೆ ಸಾಧನೆಮಾಡಿಕೊಳ್ಳುವ ಜೀವರಾಶಿಗೆ ಫಲ ಪ್ರಯೋಜನೆಗಳು ದೊರೆಯಬೇಕು. ಈ ಬಗೆಯ ಸುವ್ಯವಸ್ಥೆಯು ತಮ್ಮ ಉದ್ಧಾರ ಮತ್ತು ಕಲ್ಯಾಣಕ್ಕಾಗಿಯೇ ಇದೆ ಎಂಬ ವಿಮಲವಾದ ಮತ್ತು ಅಚಲವಾದ ಶ್ರದ್ಧೆ ಜೀವರಿಗೆ (ಪ್ರಜೆಗಳಿಗೆ) ಇರಬೇಕು. ಆಗಲೇ ನಿತ್ಯತಾಪರೂಪವಾದ ಸಂಸಾರಮಯ ಜಂಜಾಟದಿಂದ ವಿಮೋಚನೆಗೆ ಯತ್ನ ಸಾಧ್ಯ. ಇಂಥ ಸಾಧನ ಮಾರ್ಗಕ್ಕೆ ಬಂದು ಸೇರಲು ಅನೇಕ ಯೋನಿಗಳಿಂದ ಮುಂದೆ ಸಾಗಿ, ಮೇಲೇರಿ ಮಾನವ ದೇಹಕ್ಕೆ ಬರಬೇಕು. Man is the crown of the creation,

ಶ್ರೀ ಕಂಠೀರಾವ್



ಲಂದಿರುವುದರಿಂದ ಮನುಷ್ಯ ದೇಹದಲ್ಲಿ ಜ್ಞಾನದ ಬೆಳಕೂ, ಬುದ್ಧಿಯ ನಿಗ್ರಹವೂ (ಬ್ರೇಕು) ಸಾಧ್ಯವಿರುವುದರಿಂದ ಈ ದೇಹದಲ್ಲಿಯೇ ಉತ್ತಮ ಸಾಧನೆ ಮಾಡಿಕೊಳ್ಳಬೇಕು ಎಂಬುದು ವೇದೋಪನಿಷತ್ತುಗಳ ಸಾರ. ಇದನ್ನೇ "ಸಿದ್ಧಸಾಧನವೀಯದು ಬಿಂಬ ಕಾಂಬುವುದಕ್ಕೆ", "ಸಾಧನ ಶರೀರವಿದು ನೀ ದಯದಿ ಕೊಟ್ಟದ್ದು"– ಎಂದು ದಾಸಾರ್ಯರನೇಕರು ನಿರೂಪಿಸಿದ್ದಾರೆ "ಮಾನವ ಜನ್ಮವು ಬಹುದೊಡ್ಡದು, ಹಾಳುಮಾಡಿಕೊಳ್ಳಬೇಡಿ ಹಚ್ಚಪ್ಪಗಳಿರಾ" ಎಂದು ಪುರಂದರದಾಸರು ಎಚ್ಚರಿಸಿರುವುದು ಈ ದೃಷ್ಟಿಯಿಂದಲೇ.

ಜೀವಕೋಟಿಯು ವಿಕಾಸಕ್ರಮದಲ್ಲಿ ಪರಮಾತ್ಮತತ್ತ್ವದ ಪರಮಾನುಗ್ರಹದಿಂದ ತನ್ನ ಯೋಗ್ಯತೆ, ನಿಜಸ್ವರೂಪ, ಸ್ವಭಾವ ಮತ್ತು ಸಾಮರ್ಥ್ಯಕ್ಕೆ ತಕ್ಕ ಆನಂದೋತ್ಕರ್ಷವನ್ನು ಸಾಧಿಸಿಕೊಳ್ಳಲು ಏರ್ಪಟ್ಟ ರಂಗಭೂಮಿಯೇ ಈ ಪ್ರಪಂಚ. ಪರಮಾತ್ಮನೇ ಈ ನಾಟಕದ ಸೂತ್ರಧಾರಿ. ಆದುದರಿಂದಲೇ ಅವನನ್ನು ಸೂತ್ರನಾಯಕ ಎಂದಿದ್ದಾರೆ ದಾಸರು. ಅತ್ಯಂತ ಮಾನವತಾವಾದಿ ಮತ್ತು ಪದಾರ್ಥವಾದಿಯೆಂದೆನಿಸಿಕೊಂಡ ಜರ್ಮನ್ ತತ್ತ್ವಜ್ಞಾನಿ ನೀಷೆ Life is an eternal process of defying and undefying and God is its culminating point ಎಂದಿದ್ದಾನೆ. ಜೀವರಿಗೆ ಸದಾ ಉದ್ಧಾರಕ್ಕೆ ಅನುಕೂಲವೊದಗಿಸುವುದೇ ಪ್ರಪಂಚದ ಮತ್ತು ಅದರ ವ್ಯವಸ್ಥಾಪಕರ ಉದ್ದೇಶ. ಸೃಷ್ಟಿಸ್ಥಿತಿಲಯಾದಿ ವ್ಯಾಪಾರಗಳೆಲ್ಲ ನಿರಂತರವಾಗಿ ನಡೆಯುವುದು ಈ ಗುರಿ ಸಾಧನೆಗಾಗಿಯೇ ಎಂಬುದು ಭಾರತೀಯ ದೃಷ್ಟಿ. ಇದೊಂದು ಬಗೆಯ ಸುತ್ತುಚಲನ. ಇದನ್ನೇ ನೀಷೆ "World is a circular movement" ಎಂದಿದ್ದಾನೆ. ಕಾಲಚಕ್ರದ ಪರಿಭ್ರಮಣವೆಂದೂ ಹೇಳುವುದುಂಟು.

ಈ ಜಗತ್ತು, ಈ ವ್ಯವಸ್ಥೆ, ಸುಳ್ಳಾದುದಲ್ಲ, ಪರಮಸತ್ಯವಾದುದು. ಆದರೆ ದೇಶತಃ ಕಾಲತಃ ಅನಿತ್ಯವಾದುದು. ಕ್ಷಣ ಕ್ಷಣಕ್ಕೆ ನಿರಂತರ ಬದಲಾವಣೆ ಹೊಂದುವ ಸ್ವರೂಪದ್ದು. ಮೇಲೇರಬಹುದು, ಕೆಳಗಿಳಿಯಬಹುದು, ಉನ್ನತಿ ಅವನತಿ ಉಭಯಗತಿಗಳಲ್ಲಿಯು ಚಲಿಸುವುದು. ಸಾತ್ವಿಕ ಪ್ರಧಾನವಾದಾಗ ಮೇಲೇರುವುದು, ರಜೋಪ್ರಧಾನವಾದಾಗ ಸಂಸಾರರೂಪದಲ್ಲಿರುವುದು. ತಾಮೋ ಪ್ರಧಾನವಾದಾಗ ಮೂಢಯೋನಿಗಳಿಗೆ ಅಂದರೆ ಹೆಚ್ಚು ಹೆಚ್ಚು ಬುದ್ಧಿ ವಿಹೀನವಾದ ಮಂಕು ದೇಹಗಳಿಗೆ ಕೆಳಗಿಳಿಯ ಬೇಕಾಗುವುದು. ಈ ಅಂಶವನ್ನು ದಾಸರಾಯರನೇಕರು ಅದರಲ್ಲಿಯೂ ವಿಜಯದಾಸರು ಸಾಧನಾಭಾಗದ ತಮ್ಮ ಸುಳಾದಿಗಳಲ್ಲಿ ಬಹುಸುದೀರ್ಘವಾಗಿ ವಿವರಿಸಿದ್ದಾರೆ.

ಪುರಂದರ ದಾಸರು, ವಿಜಯದಾಸರು, ಗೋಪಾಲದಾಸರು ಪ್ರತಿಪಾದಿಸಿರುವ ತತ್ತ್ವಗಳನ್ನೆಲ್ಲ ಕ್ರೋಢೀಕರಿಸಿ ಶ್ರೀ ಜಗನ್ನಾಥದಾಸರು ತಮ್ಮ 32 ಸಂಧಿಗಳಿಂದ ಕೂಡಿದ 'ಹರಿಕಥಾಮೃತಸಾರ'ವೆಂಬ ಅಮೂಲ್ಯ ಗ್ರಂಥದಲ್ಲಿ ವೇದ ಉಪನಿಷತ್ತುಗಳಿಗೆ ಒಂದು ಕನ್ನಡ ಕೈಪಿಡಿಯನ್ನೇ ರಚಿಸಿದ್ದಾರೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಈ ಸಂಧಿಕ್ರಮದಲ್ಲಿ ಕರುಣಾಸಂಧಿ, ವ್ಯಾಪ್ತಿಸಂಧಿ, ಭೋಜನ ಸಂಧಿ, ಸರ್ವಪ್ರತೀಕಸಂಧಿ, ಜೀವಪ್ರಕ್ರಿಯಾಸಂಧಿ, ಶ್ವಾಸಸಂಧಿ, ದತ್ತಸ್ವಾತಂತ್ರ್ಯ ಸಂಧಿ ಮೊದಲಾಗಿವೆ.

ಇವುಗಳಲ್ಲಿ ಪ್ರತಿಪಾದಿತವಾದ ವಿಷಯಗಳು ಆಧುನಿಕ. ಅನೇಕ ವೈಜ್ಞಾನಿಕ ಮತ್ತು ಸಂವಿಧಾನಾತ್ಮಕ ವಿಚಾರಗಳಿಗೂ ತತ್ತ್ವಗಳಿಗೂ ಮೂಲಭೂತವಾದ ತಳಹದಿಯಂತಿವೆ ಎಂಬುದು ಗೊತ್ತಾಗದೆ ಇರದು. 'ದತ್ತ ಸ್ವಾತಂತ್ರ್ಯ ಸಂಧಿ'ಯನ್ನು ಓದುವಾಗ ನಮ್ಮ ಇಂದಿನ ಮೂಲಭೂತ ಹಕ್ಕುಗಳ ಜ್ಞಾಪಕ ಬರುತ್ತದೆ. ವಿಷ್ಣುವೇ ಮೋಕ್ಷದಾತನು. ಆದರೆ ಆತನ ಅನುಜ್ಞೆಯಿಂದ ವಾಯುದೇವರು ಕೆಲವು ಸಂದರ್ಭಗಳಲ್ಲಿ ಆ ಅಧಿಕಾರವನ್ನು ಚಲಾಯಿಸಬಹುದು ಎಂಬುದನ್ನು ಪರಿಶೀಲಿಸಿದಾಗ ನಮ್ಮ ಈಗಿನ Delegation of authority or powers ಅಥವಾ Subordinate Legislation ಎಂಬ ವಿಷಯಗಳ ಜ್ಞಾಪಕವಾಗುತ್ತದೆ. ದೇವತೆಗಳಲ್ಲಿ, ದೈತ್ಯರಲ್ಲಿ, ಮನುಷ್ಯರಲ್ಲಿ ಇತರ ಜೀವರಾಶಿಗಳಲ್ಲಿ ಗುಣತಾರತಮ್ಯವನ್ನು ಕುರಿತು ಪ್ರತಿಪಾದನೆಯನ್ನು ನೋಡಿ

ದಾಗ ನಾವು ಇಂದು ಮಾನವ ಪ್ರಯತ್ನದ ಪ್ರತಿಯೊಂದು ಕ್ಷೇತ್ರದಲ್ಲಿ ಕಾಣುವ ದಕ್ಷತೆ, ಯೋಗ್ಯತೆ, ಕಾರ್ಯಸಾಮರ್ಥ್ಯ, ಸ್ಥಾನಮಾನ, ಅಧಿಕಾರ ವ್ಯತ್ಯಾಸ, ಹೊಣೆ ಜವಾಬ್ದಾರಿಗಳ ಇತಿ – ಮಿತಿ, ಏರುಪೇರು, ಇವುಗಳ ನೆನಪಾಗಿ ಇಂದಿನ ಜಗತ್ತಿನಲ್ಲಿ ಕಂಡುಬರುವ Merit, Competency, Gradation, Ranking ಮತ್ತು Seniority – ಇತ್ಯಾದಿ ವಿಷಯಗಳೆಲ್ಲ ಅರ್ಥಪೂರ್ಣವಾದ ಅನಾದಿ ನಿತ್ಯವಾದ ಸತ್ಯತತ್ತ್ವಗಳೆಂಬುದನ್ನು ಮನಗಾಣುತ್ತೇವೆ. ಇದನ್ನೇ ನೀಷೆ All men are not alike, but all alike should have equal opportunity" ಎಂದೂ ಹೇಳಿ ಪ್ರಯತ್ನವಾದವನ್ನು ಸಮರ್ಥಿಸುತ್ತಾನೆ. ಇದು "ಸತ್ಯಂಜಗಕಿದು ಪಂಚಭೇದವು ನಿತ್ಯ ಶ್ರೀ ಗೋವಿಂದನಾ ಕೃತ್ಯ ಎಂದರಿತು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ" ಎಂಬ ದಾಸರ ಆಸ್ತಿಕ ವಾದದ ಆಧುನಿಕ ವ್ಯಾಖ್ಯಾನವೆಂಬಂತೆ ಕಾಣುವುದಿಲ್ಲವೇ?

ಪರಮಾಧಿಕಾರದ ಮೂಲ ಕೇಂದ್ರವಾದ ಪರಮಾತ್ಮತತ್ತ್ವರೂಪನಾದ ಶ್ರೀ ಮನ್ನಾರಾಯಣನು ಆಯಾ ಸ್ಥಾನಮಾನದ ಅಧಿಕಾರಿಗಳನ್ನು ಸೃಷ್ಟಿಸಿ, ನಿಯಮಿಸಿ ಆ ದ್ವಾರಾ (through various agencies) ಈ ಸೃಷ್ಟಿ ಸ್ಥಿತಿಲಯಾದಿ ಲೀಲಾ ವಿನೋದರೂಪವಾದ ನಿತ್ಯ ವ್ಯಾಪಾರವನ್ನು ನಿತ್ಯನಿನೂತನವಾದ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದ್ದಾನೆ ಎಂಬುದನ್ನು ತಿಳಿಸುವುದೇ ದಾಸಾರ್ಯರೆಲ್ಲರ ಕೃತಿಗಳ ಸಾರಾಂಶವಾಗಿದೆ. "ಜಗವನೆಲ್ಲವ ನಿರ್ಮಿಸುವ ನಾಲ್ಮೊಗನೊಳಗಿದ್ದು ತಾನಿದ್ದು ಸಲಹುವ ಗಗನ ಕೇಶನೊಳಿದ್ದು ಸಂಹರಿಸುವನು ಲೋಕಗಳ" ಎಂಬ ಮಾತಿನಿಂದ ಜಗನ್ನಾಥದಾಸರು ಈ ತತ್ತ್ವವನ್ನೇ ಪ್ರತಿಪಾದಿಸಿದ್ದಾರೆ.

ಈಗ ಜೀವನದ ಪ್ರತಿಯೊಂದು ಕಾರ್ಯ ಕ್ಷೇತ್ರದಲ್ಲಿ ನಾವು Service-'ಸೇವೆ' ಎಂಬ ಪದವನ್ನು ಬಳಸುತ್ತೇವೆ. ಈ ಪ್ರಯೋಗಗಳೆಲ್ಲ ಜನ್ಮ ಸಾರ್ಥಕತೆಯನ್ನು ಜೀವನದ ಧ್ಯೇಯೋದ್ದೇಶಸಾಫಲ್ಯದ ಪ್ರಯತ್ನವನ್ನು ಸೂಚಿಸುವ ಪ್ರಯೋಗವಾಗಿವೆ. ದಾಸತ್ತ್ವ ಮತ್ತು ದಾಸಸಾಹಿತ್ಯ ಎಂಬುದು ಈ ಮಹಾ ಗುರಿಯನ್ನೇ ಹೊಂದಿದೆಯೆಂದು ಬೇರೆ ಹೇಳಬೇಕಾಗಿಲ್ಲ. ದಾಸತ್ವದ ತತ್ತ್ವವನ್ನು ಮಹತ್ವವನ್ನೂ ಸರಿಯಾಗಿ ತಿಳಿದು ಕೊಂಡವನೇ ಈಶನಾಗಬಲ್ಲ. ಆದುದರಿಂದ, ಸರಿಯಾಗಿ ಸೇವೆ ಮಾಡುವುದು,ತೃಪ್ತಿಕರವಾಗಿ ಸೇವೆ ಮಾಡುವುದು. ಫಲಕಾರಿಯಾಗಿ ಸೇವೆ ಸಲ್ಲಿಸುವುದು ಸುಲಭವಲ್ಲ ಎಂಬುದನ್ನು ಚೆನ್ನಾಗಿ ಅರಿತು ಕೊಳ್ಳಬೇಕು. ಹುಕುಮು ಮಾಡುವುದು ಸುಲಭ, ಅದನ್ನು ಈಡೇರಿಸುವುದು ಕಷ್ಟದ ಕೆಲಸ. ಪರಿಶ್ರಮದ ಕೆಲಸ ಇದು ಅನುಭವದ ಮಾತು. ಅಂತೆಯೇ "ಸೇವಾಧರ್ಮ ಪರಮಗಹನೋ ಯೋಗಿನಾಮಪ್ಯಗಮ್ಯ" ಎಂದಿದ್ದಾರೆ. ಕಠೋರ ಒಡೆಯರನ್ನೂ ಸಿಪ್ಪರ ಒಡೆಯರನ್ನು ಅಂದರೆ ಅಚ್ಚುಕಟ್ಟಾದ ಮತ್ತು ಕಟ್ಟುನಿಟ್ಟಾದ ಕೆಲಸವನ್ನು ನಿರೀಕ್ಷಿಸುವ ಒಡೆಯರನ್ನು ತೃಪ್ತಿಪಡಿಸುವುದಕ್ಕೆ ಬಹು ಪ್ರಯಾಸ ಮತ್ತು ಪ್ರಯತ್ನ ಪಡಬೇಕಾಗುತ್ತದೆ ಈ ಸೇವಾಭಾವದ ಮಹತ್ವವನ್ನೂ ಜಗದೊಡೆಯನಾದ ಪರಮಾತ್ಮನೇ ತೋರಿಸಿ ಕೊಟ್ಟಿದ್ದಾನೆ. ಅವನು ಸ್ವತಃ ಅರ್ಜುನನ ರಥದ ಸಾರಥಿಯಾಗಿ ಸೇವೆ ಸಲ್ಲಿಸಿದ, ಜವಾನನಾಗಿ ಬಲಿಯ ಬಾಗಿಲ ಕಾಯ್ದ. ರಾಜಸೂಯಯಾಗದಲ್ಲಿ ಎಂಜಲು ಬಳಿದ. ಅಂತೆಯೇ ಕನಕದಾಸರು ಈ ಸೇವಾಭಾವದ ಮಹತ್ವವನ್ನು ಸೂಚಿಸುವುದಕ್ಕಾಗಿ "ಬಾಗಿಲನು ತೆರೆದು ಸೇವೆಯನು ಕೊಡು ಹರಿಯೇ" ಎಂದು ಪರಮಾತ್ಮನ ಬಾಗಿಲು ತಟ್ಟಿ ಕೇಳಿದರು. ಬಾಗಿಲು ತಟ್ಟಿ ಕೇಳಿದ್ದು ಯಾವುದೇ ಸುಖಭೋಗದ ಸಾಮಗ್ರಿಯನ್ನಲ್ಲ, ಐಶ್ವರ್ಯವನ್ನಲ್ಲ, ಸೇವೆಯ ಒಂದು ಸದವಕಾಶವನ್ನು ಎಂಬುದನ್ನು ನಾವು ನೆನಪಿಡಬೇಕು. ಇದೇ ದಾಸತ್ತ್ವದ ಮೂಲ ಮರ್ಮ, ಜೀವಾಳ. ಪರಟ ತಂಬೂರಿ ಹಿಡಿದು ತಿರಿತಿಂದಾದರೂ ಚಿಂತೆಯಿಲ್ಲ; ನೀನು ಕರೆದ ಕೆಲಸಕ್ಕೆ ನಾನು ಸದಾ ಸಿದ್ಧನಾಗಿರುತ್ತೇನೆ; ನನ್ನ ಊಟ ಉಡಿಗೆ, ವಿರಾಮ ಇದೊಂದು ನೀನು ಚಿಂತಿಸ ಬೇಡ, ಎಂದಿದ್ದಾರೆ ಮಂತ್ರಾಲಯ ಪ್ರಭುಗಳು. ಇದು ಸಮರ್ಪಣಭಾವದ ಸೇವಾಧರ್ಮದ ಮಹತ್ವವನ್ನು ಸೂಚಿಸುವುದೆಂಬುದನ್ನು ಅಂತುಕೊಳ್ಳಬೇಕು. ದಾಸತ್ವವು ಸಮಾಜಕ್ಕೆ, ರಾಷ್ಟ್ರಕ್ಕೆ, ದೇಶಕ್ಕೆ ನಾವು ಏನುಕೊಡಬೇಕು ಎಂಬುದನ್ನು ಸೂಚಿಸುವುದೇ ಹೊರತು ಏನು ಪ್ರತಿಫಲ ಪಡೆಯಬೇಕೆಂಬುದನ್ನು ಸೂಚಿಸುವುದಿಲ್ಲ. ಇದು ದಾಸತ್ವದ, ಸೇವಾಭಾವದ ಮಹತ್ವವನ್ನು ಸೂಚಿಸುವ ಕಿವಿಮಾತಲ್ಲವೇ ? "Many a one hath cast away his final worth when he cast away his servitude" ಎಂಬ ನೀಷೆ ಮಾತು ಬಹು ಅರ್ಥಪೂರ್ಣವಾಗಿದೆ,

ರಾಜಾಶ್ರಯ, ಮಠಮಾನ್ಯ, ಮೂನಸನ್ಮಾನಗಳ ಬೆನ್ನುಹತ್ತಿದ ವಿದ್ವಾಂಸರಿಂದ, ಮತ್ತು ಐಹಿಕಭೋಗಭಾಗ್ಯಗಳನ್ನು ಸಂಪಾದಿಸಲು ಪ್ರಯತ್ನಿಸಿದ ಪಂಡಿತರಿಂದ ತತ್ತ್ವಚಿಂತನ ಮಂಥನ ನಡೆಯಿತೇ ಹೊರತು ಅದನ್ನು ನಡೆನುಡಿಯಲ್ಲಿ ಸಾಧಿಸಿ ಮುಗ್ಧ ಜನತೆಯನ್ನು ಉದ್ಧರಿಸುವ ಕೆಲಸವಾಗಲಿಲ್ಲ. ಹಾಗಾದಾಗಲೇ ಸ್ವತಃ ಕೆಲವು ಜನ ಯತಿಗಳು ದೂರದೃಷ್ಟಿಯಿಂದ ತಾನೇ ಮುಂದಾಗಿ ದಾಸಪಂಥವನ್ನು ರೂಪಿಸಿ, ಮಾರ್ಗದರ್ಶನ ನೀಡಿ ಗ್ರಾಮಾಂತರದ ಜನಮನವನ್ನು ಮುಟ್ಟಿ, ಕಾಸು ವೀಸವನ್ನು ಬೇಡದೆ ವೈರಾಗ್ಯ ಭಾವದಿಂದ ಸೇವಾಭಾವದ ಮಹಾನ ದೇಶವನ್ನು ಪಾಮರರ ಮನೆಬಾಗಿಲಿಗೆ ಮುಟ್ಟಿಸುವಂತೆ ಮಾಡಿದರು. ಈ ಮಹೋದ್ದೇಶವನ್ನು ಪಡೆದು ಕನ್ನಡ ಕುಲಕೋಟಿಯನ್ನು ಉದ್ಧರಿಸಿದ ಕೀರ್ತಿ ಎಲ್ಲ ದಾಸಾರ್ಯರಿಗೂ ದಾಸಪಂಥಕ್ಕೂ, ದಾಸಸಾಹಿತ್ಯಕ್ಕೂ ಸೇರಬೇಕು. ಭಾರತದೇಶದ ಇತರ ಭಾಗಗಳಲ್ಲಿಯೂ ಇತರ ಕಾಲಗಳಲ್ಲಿಯೂ ಚೈತನ್ಯಪಂಥವರು, ಕಬೀರ ಪಂಥದವರು, ತುಲಸೀದಾಸರು, ಸಮರ್ಥರಾಮದಾಸರು – ಈ ಸಂದೇಶವನ್ನು ಸಾರಿದ್ದಾರೆ.

ಹರಿದಾಸ ಪರಂಪರೆಯಲ್ಲಿ ಅಪರೋಕ್ಷಜ್ಞಾನಿಗಳೆನಿಸಿದ ರಾಯಚೂರು ಜಿಲ್ಲೆಯ ಮಾನವಿಯ ಶ್ರೀಜಗನ್ನಾಥದಾಸರ ಸಾಕ್ಷಾತ್ ಶಿಷ್ಯರಾದ ಲಿಂಗಸೂಗೂರು ಶ್ರೀ ಪ್ರಾಣೇಶದಾಸರೂ ಈ ಸಂದೇಶವನ್ನು ಸಾರಿದ ಮಹಾಮಹಿಮರು. ಇವರ ಪೀಳಿಗೆಯ ಅಭಿನವ ಪ್ರಾಣೇಶ ವಿಠಲರು ಶ್ರೀವರದೇಂದ್ರರ ಅರ್ಚಕರಾಗಿದ್ದ ಹನುಮಂತ ರಾಯರು (ನನ್ನ ಸೋದರ ಮಾವಂದಿರು) ಅವರ ತಮ್ಮಂದಿರಾದ ಶ್ರೀ ಸುಳಾದಿ ಕುಪ್ಪೇಯರಾರಾಯರು, ದಾಸಾಹಿತ್ಯ ನಿರ್ಮಾಣ ಕಾರ್ಯವನ್ನೂ ಅದನ್ನು ಸುಶ್ರಾವ್ಯವಾಗಿ ಹೇಳುವ ಪರಂಪರೆಯನ್ನು ತೀರ ಇತ್ತೀಚಿನವರೆಗೂ ಮುಂದುವರಿಸಿಕೊಂಡು ಬಂದರು.

ಲಿಂಗಸೂಗೂರಿನ ಶ್ರೀವರದೇಂದ್ರ ಹರಿದಾಸ ಸಾಹಿತ್ಯ ಮಂಡಲವು ಗೋರೇಬಾಳ ಹನಮಂತ ರಾಯರ ನೇತೃತ್ವದಲ್ಲಿ ಅಪರೋಕ್ಷಜ್ಞಾನಿಗಳಾದ ಪುರಂದರದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು ಮತ್ತು ಪ್ರಾಣೇಶದಾಸರ ಕೃತಿಗಳನ್ನೆಲ್ಲ ಸಂಗ್ರಹಿಸಿ ಪ್ರಕಟಿಸಿದೆ. ಗೋರೇಬಾಳರ ಸೇವೆ ಅಪ್ರತಿಮವಾದದು. ಗೋಪಾಲದಾಸರು ಬರೆದ ವಿರಾಟರೂಪದ ಚಿತ್ರವನ್ನು ಫೋಟೋತೆಗೆದು ಪ್ರಕಟಿಸುವ ಕಾರ್ಯದಲ್ಲಿ ಮತ್ತು ಸೃಷ್ಟಿ ಪ್ರಕರಣ ಸುಳಾದಿ ಗ್ರಂಥವನ್ನು ಸಂಪಾದಿಸುವಾಗ ಬ್ರಹ್ಮಾಂಡ ವಿವರಗಳ ನಕಾಶೆಗಳನ್ನು ತಯಾರಿಸುವಾಗ ದಿ॥ ಗೋರೇಬಾಳರು ನನ್ನ ಅಲ್ಪ ಸೇವೆಯನ್ನೂ ಪಡೆದು ಆಶೀರ್ವದಿಸಿದ್ದಾರೆ. ನಾನು ಕೃತಾರ್ಥ.

ಈಗಲೂ ಲಿಂಗಸೂಗೂರಿನ ಹರಿದಾಸ ಸಾಹಿತ್ಯ ಮಂಡಲವು ಪ್ರಕಟನ ಕಾರ್ಯವನ್ನು ಮುಂದುವರಿಸಿದೆ. ಶ್ರೀನಿವಾಸರಾಯರು (ಸೀಮಾಮಾ) ಈಹೊಣೆ ಹೊತ್ತು ಶ್ರಮಿಸುತ್ತಿದ್ದಾರೆ. ಈ ಪ್ರಯತ್ನವು ಹೆಚ್ಚಿನ ಬೆಂಬಲವನ್ನು ಗಳಿಸಿಕೊಂಡರೆ ಹಿತ ಎಂದು ಹೇಳಬಯಸುತ್ತೇನೆ.

———

# ಹಿಮವದ್ಗೋಪಾಲಸ್ವಾಮಿ

ಕನ್ನಡನಾಡು ಮೊದಲಿನಿಂದಲೂ ಧರ್ಮ ಸಹಿಷ್ಣುತೆಯ ನಾಡು ಕಲೆಗಳ ಬೀಡು, ಧರ್ಮ ಸಹಿಷ್ಣುತೆಯ ನೆಲೆಯಾದ ಈ ನಾಡಿನಲ್ಲಿ ಅನೇಕ ಧರ್ಮ ಸಂಸ್ಥೆಗಳು ಅಲ್ಲದೆ ಅನೇಕ ದೇವಾಲಯಗಳು ಇವೆ. ಪ್ರತಿಯೊಂದ ಊರಿನಲ್ಲೂ ಜನ ದೇವಾಲಯಗಳನ್ನು ಕಟ್ಟಿ ತಮ್ಮ ಕಷ್ಟಗಳನ್ನು ಪರಿಹರಿಸಿಕೊಳ್ಳುತ್ತಾರೆ. ನೆಮ್ಮದಿಯಿಂದ ಜೀವನ ನಡೆಸುತ್ತಾ ಬಂದಿದ್ದಾರೆ. ದೇವರುಗಳನ್ನು ಸುಂದರವಾದ ತಾಣದಲ್ಲಿ ಪ್ರತಿಷ್ಠಾಪಿಸಿ ಸದಾ ಪೂಜೆಗೈಯುತ್ತಾರೆ.

ಅದೇ ರೀತಿ ಮೈಸೂರಿನ ಜಿಲ್ಲೆ ಗುಂಡ್ಲುಪೇಟೆ ತಾಲೂಕು ಹಂಗಾಳ ಹೋಬಳಿ ಕಣಗಾಲ (ಗುಂಡ್ಲುಪೇಟೆಯಿಂದ ಸುಮಾರು 18 ಕಿ. ಮಿ.) ಗ್ರಾಮದಲ್ಲಿ ಇರುವ ಶ್ರೀ ಹಿಮವದ್ಗೋಪಾಲ ಸ್ವಾಮಿ ಬೆಟ್ಟ ಒಂದು ಪ್ರಸಿದ್ಧವಾದ ಪುಣ್ಯಕ್ಷೇತ್ರ. ಈ ಪುಣ್ಯಕ್ಷೇತ್ರದ ಶ್ರೀ ವೇಣುಗೋಪಾಲಸ್ವಾಮಿ ದೇವರು ತುಂಬಾ ಸುಂದರವಾಗಿದೆ. ಸುತ್ತಲೂ ಅಷ್ಟ ತೀರ್ಥಗಳ ಮಧ್ಯೆ, ಸುಂದರವಾದ ಸದಾ ಹಚ್ಚ ಹಸುರಾಗಿರುವ ವನದ ಮಧ್ಯೆ ಈ ಪುಣ್ಯಕ್ಷೇತ್ರ ನೆಲೆಯಾಗಿದೆ. ಈ ವೇಣುಗೋಪಾಲ ಸ್ವಾಮಿಯ ಮೂರ್ತಿಯನ್ನು ಅಗಸ್ತ್ಯ ಮಹರ್ಷಿಗಳು ಸ್ಥಾಪಿಸಿದರೆಂಬ ಐತಿಹ್ಯವಿದೆ. ಒಮ್ಮೆ ಅಗಸ್ತ್ಯ ಮಹರ್ಷಿಗಳು ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಈ ಸುಂದರವಾದ ಕಾನನದಲ್ಲಿ ತಂಗುವ ಸನ್ನಿವೇಶ ದೊರಕಿತು. ಆಗ ಮಹರ್ಷಿಗಳು ಅಲ್ಲಿಯ ಸುಂದರವಾದ ತಂಪಾದ ವಾತವರಣವನ್ನು ಮೆಚ್ಚಿ ಇಲ್ಲಿ ಶ್ರೀವೇಣುಗೋಪಾಲಸ್ವಾಮಿಯ ಮೂರ್ತಿಯನ್ನು ಸ್ಥಾಪಿಸಿ ಕೆಲವು ಕಾಲ ಪೂಜೆಗೈದರು.

ಕ್ರಿ. ಶ. 1315 ರಲ್ಲಿ ತೆರಕಣಾಂಬಿಯ ಮಾಧವ ದಂಡನಾಯಕ ಎಂಬ ಪಾಳ್ಳೇಗಾರನು ಒಮ್ಮೆ ಬೇಟೆಗೆಂದು ಬೆಟ್ಟಕ್ಕೆ ಹೋದಾಗ ದಣಿವಾರಿಸಿ ಕೊಳ್ಳಲು ಈ ಜಾಗದಲ್ಲಿ ಬೀಡು ಬಿಟ್ಟನು. ಆಗ ಶ್ರೀ ವೇಣುಗೋಪಾಲಸ್ವಾಮಿಯನ್ನು ನೋಡಿ, ಸ್ಥಳದ ಪ್ರಕೃತಿಯ ರಮ್ಯತೆಗೆ, ಪರಮಾತ್ಮನ ದಿವ್ಯ ರೂಪಕ್ಕೆ, ಮನಸೋತು ಈ ದೇವಸ್ಥಾನವನ್ನು ಕಟ್ಟಿಸಿದನೆಂದು ಹೇಳುತ್ತಾರೆ. ಈ ದೇವಸ್ಥಾನದ ಗರ್ಭಗುಡಿಯಲ್ಲಿ ಸದಾಕಾಲವೂ ನೀರು ಜಿನುಗುತ್ತದೆ. ಸಾಧಾರಣವಾಗಿ ವರ್ಷದ ಎಲ್ಲಾ ಕಾಲದಲ್ಲೂ ಬೆಳಗಿನ ಜಾವದಲ್ಲಿ ಹಿಮ ಬೀಳುತ್ತದೆ. ಬೇಸಿಗೆಯಲ್ಲಿ ಬಹಳ ತಂಪಾಗಿರುತ್ತದೆ. ಮನಸ್ಸಿಗೆ ಶಾಂತಿಯನ್ನು ಆಹ್ಲಾದವನ್ನು ನೀಡುವ ಈ ತಾಣವು ಪ್ರಕೃತಿಯ ರಮ್ಯತೆಯ ಪುಣ್ಯ ಕ್ಷೇತ್ರವಾಗಿದೆ.

ಈ ದೇವಸ್ಥಾನದ ಸುತ್ತಲೂ 72 ತೀರ್ಥಗಳಿದ್ದು ಅದರಲ್ಲಿ ಅಷ್ಟ ತೀರ್ಥ, ಹಂಸತೀರ್ಥ, ಚಕ್ರ ತೀರ್ಥ, ಇತ್ಯಾದಿಗಳು ಪ್ರಮುಖ. ಒಂದೊಂದಕ್ಕೂ ಒಂದೊಂದು ಐತಿಹ್ಯವಿದೆ. ಶ್ರೀ ಹಿಮವದ್ಗೋಪಾಲ ಸ್ವಾಮಿಯ ದೇವಸ್ಥಾನ ಈಗ ಮುಜರಾಯಿ ಇಲಾಖೆಯ ಆಡಳಿತಕ್ಕೆ ಸೇರಿದೆ. ಪ್ರತಿ ಶನಿವಾರ ಬೆಳಗ್ಗೆ ಈ ಬೆಟ್ಟಕ್ಕೆ ಹೋಗಿ ಬರಲು ವಾಹನದ ಸೌಕರ್ಯವಿದೆ.

ಇಂದು ಸುಂದರವಾದ ಪುಣ್ಯ ಕ್ಷೇತ್ರಕ್ಕೆ ಒಮ್ಮೆ ಹೋಗಿ ಶ್ರೀ ವೇಣು ಗೋಪಾಲ ಸ್ವಾಮಿಯ ದರ್ಶನ ಪಡೆದು ದೇವರ ಕೃಪೆಗೆ ಪಾತ್ರರಾಗಬೇಕು.

**ಶ್ರೀ ಬಿ. ಷಣ್ಮುಖಾಚಾರ್ಯ**

( ಹಿಂದಿನ ಸಂಚಿಕೆ ತರುವಾಯ )

# ಶ್ರೀ ಮದ್ಭಗವದ್ಗೀತೆ

## ಅರ್ಜುನನಿಗೆ ಯುದ್ಧವು ಬೇಡವೆನಿಸಿದ್ದು

ಅರ್ಜುನ ಉವಾಚ :

ಸೇನಯೋರುಭಯೋರ್ಮಧ್ಯೇ
ರಥಂ ಸ್ಥಾಪಯ ಮೇಽಚ್ಯುತ ॥ 21

ಅರ್ಜುನ : ಕೃಷ್ಣ, ಎರಡು ಸೇನೆಗಳ ನಡುವೆ ನನ್ನ ರಥವನ್ನು ನಿಲ್ಲಿಸು.

ಯಾವದೇತಾನ್ನಿರೀಕ್ಷೇಽಹಂ
ಯೋದ್ಧುಕಾಮಾನವಸ್ಥಿತಾನ್ ।
ಕೈರ್ಮಯಾ ಸಹ ಯೋದ್ಧವ್ಯಂ
ಅಸ್ಮಿನ್ ರಣಸಮುದ್ಯಮೇ ॥ 22

ಕಾದಬೇಕೆಂದು ನಿಂತಿರುವವರನ್ನು, ಈ ಯುದ್ಧದಲ್ಲಿ ನಾನು ಯಾರೊಡನೆ ಕಾದಬೇಕಾಗಿದೆ ಎಂಬುದನ್ನೂ ಒಮ್ಮೆ ನೋಡುತ್ತೇನೆ.

ಯೋತ್ಸ್ಯಮಾನಾ ನವೇಕ್ಷೇಽಹಂ
ಯ ಏತೇಽತ್ರ ಸಮಾಗತಾಃ ।
ಧಾರ್ತರಾಷ್ಟ್ರಸ್ಯ ದುರ್ಬುದ್ಧೇಃ
ಯುದ್ಧೇ ಪ್ರಿಯಚಿಕೀರ್ಷವಃ ॥ 23

ದುರ್ಬುದ್ಧಿಯ ದುರ್ಯೋಧನನಿಗೆ ಈ ಯುದ್ಧದಲ್ಲಿ ನೆರವಾಗಬೇಕೆಂದು ಕಾದುವುದಕ್ಕಾಗಿ ಯಾರು ಯಾರು ಇಲ್ಲಿಗೆ ಬಂದಿರುತ್ತಾರೆಂಬುದನ್ನು ನಾನೊಮ್ಮೆ ನೋಡುತ್ತೇನೆ.

ಸಂಜಯ ಉವಾಚ :

ಏವಮುಕ್ತೋ ಹೃಷೀಕೇಶಃ
ಗುಡಾಕೇಶೇನ ಭಾರತ ।
ಸೇನಯೋರುಭಯೋರ್ಮಧ್ಯೇ
ಸ್ಥಾಪಯಿತ್ವಾ ರಥೋತ್ತಮಮ್ ॥ 24

ಭೀಷ್ಮದ್ರೋಣಪ್ರಮುಖತಃ
ಸರ್ವೇಷಾಂ ಚ ಮಹೀಕ್ಷಿತಾಮ್ ।
ಉವಾಚ ಪಾರ್ಥ ಪಶ್ಯೈತಾನ್
ಸಮವೇತಾನ್ ಕುರೂನಿತಿ ॥ 25

ಸಂಜಯ : ಧೃತರಾಷ್ಟ್ರನೇ, ಅರ್ಜುನನು ಹೀಗೆ ಹೇಳಿದಾಗ, ಕೃಷ್ಣನು ಭೀಷ್ಮ ದ್ರೋಣರ ಮತ್ತು ಎಲ್ಲ ಅರಸರ ಎದುರಿಗೆ ಎರಡು ದಂಡುಗಳ ನಡುವೆ ರಥವನ್ನು ನಿಲ್ಲಿಸಿ, 'ಅರ್ಜುನನೇ ಇಲ್ಲಿ ನೆರೆದಿರುವವರನ್ನು ನೋಡು' ಎಂದು ಹೇಳಿದನು.

ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ
ಪಿತೄನಥ ಪಿತಾಮಹಾನ್ ।
ಆಚಾರ್ಯಾನ್ ಮಾತುಲಾನ್ ಭ್ರಾತೄನ್
ಪುತ್ರಾನ್ ಪೌತ್ರಾನ್ ಸಖೀಂಸ್ತಥಾ ॥26

ಶ್ವಶುರಾನ್ ಸುಹೃದಶ್ಚೈವ
ಸೇನಯೋರುಭಯೋರಪಿ ।
ತಾನ್ ಸಮೀಕ್ಷ್ಯ ಸ ಕೌಂತೇಯಃ
ಸರ್ವಾನ್ ಬಂಧೂನವಸ್ಥಿತಾನ್ ॥ 27

ಅರ್ಜುನನು ಅಲ್ಲಿ ನಿಂದಿರುವ ಪಿತೃತುಲ್ಯರು, ಅಜ್ಜಂದಿರು, ಗುರುಗಳು, ಸೋದರ ಮಾವಂದಿರು ಅಣ್ಣತಮ್ಮಂದಿರು, ಮಕ್ಕಳು, ಮೊಮ್ಮಕ್ಕಳು, ಜತೆಗಾರರು, ಮಾವಂದಿರು, ಸ್ನೇಹಿತರು– ಹೀಗೆ ಎಲ್ಲ ಬಗೆಯ ಬಂಧುಗಳನ್ನು ಎರಡೂ ಕಡೆಯ ದಂಡಿನಲ್ಲಿ ಕಂಡನು.

ಕೃಪಯಾ ಪರಯಾಽಽವಿಷ್ಟಃ
ವಿಷೀದನ್ನಿದಮಬ್ರವೀತ್ ।
ದೃಷ್ಟ್ವೇಮಂ ಸ್ವಜನಂ ಕೃಷ್ಣ
ಯುಯುತ್ಸುಂ ಸಮುಪಸ್ಥಿತಮ್ ॥ 28

ಹೀಗೆ ಅಲ್ಲಿ ನೆರೆದಿರುವ ಬಂಧುಗಳನ್ನೆಲ್ಲ ನೋಡಿ ಅರ್ಜುನನು ತುಂಬ ಕನಿಕರಗೊಂಡು ವಿಷಾದದಿಂದ ಈ ಮಾತನ್ನು ಹೇಳಿದನು.

ಅರ್ಜುನ ಉವಾಚ :

ಸೀದಂತಿ ಮಮ ಗಾತ್ರಾಣಿ
ಮುಖಂ ಚ ಪರಿಶುಷ್ಯತಿ ।
ವೇಪಥುಶ್ಚ ಶರೀರೇ ಮೇ
ರೋಮಹರ್ಷಶ್ಚ ಜಾಯತೇ ॥ 29

ಅರ್ಜುನ : ಕೃಷ್ಣ, ಕಾದುವುದಕ್ಕೆಂದು ನೆರೆದಿರುವ ಈ ನನ್ನವರನ್ನು ನೋಡಿ ನನ್ನ ಅವಯವಗಳು ಸೊರಗುತ್ತಿವೆ. ಬಾಯಿ ಒಣಗುತ್ತಿದೆ. ನನ್ನ ಮೈಯಲ್ಲಿ ನಡುಕ ಮೂಡಿ ರೋಮ ನಿಗುರಿ ನಿಂತಿದೆ.

ಗಾಂಡೀವಂ ಸ್ರಂಸತೇ ಹಸ್ತಾತ್
ತ್ವಕ್ಚೈವ ಪರಿದಹ್ಯತೇ ।
ನ ಚ ಶಕ್ನೋಮ್ಯವಸ್ಥಾತುಂ
ಭ್ರಮತೀವ ಚ ಮೇ ಮನಃ ॥ 30

ಕೈಯಿಂದ ಗಾಂಡೀವ ಧನು ಕುಸಿಯುತ್ತಿದೆ. ಚರ್ಮವೂ ಸುಡುತ್ತಿದೆ. ನನಗೆ ನಿಲ್ಲುವುದಕ್ಕೂ ಆಗುವುದಿಲ್ಲ. ನನ್ನ ಮನಸ್ಸು ತಳಮಳಗೊಂಡಿದೆ.

ನಿಮಿತ್ತಾನಿ ಚ ಪಶ್ಯಾಮಿ
ವಿಪರೀತಾನಿ ಕೇಶವ ।
ನ ಚ ಶ್ರೇಯೋಽನುಪಶ್ಯಾಮಿ
ಹತ್ವಾ ಸ್ವಜನಮಾಹವೇ ॥ 31

ಕೃಷ್ಣ, ಕೆಟ್ಟ ಅಪಶಕುನಗಳನ್ನು ಕಾಣುತ್ತಿದ್ದೇನೆ. ಯುದ್ಧದಲ್ಲಿ ನನ್ನವರನ್ನು ಕೊಂದರೆ ಒಳ್ಳೆಯದಾದೀತೆಂದು ನನಗೆ ಅನ್ನಿಸುವುದಿಲ್ಲ.



ನ ಕಾಂಕ್ಷೇ ವಿಜಯಂ ಕೃಷ್ಣ
ನ ಚ ರಾಜ್ಯಂ ಸುಖಾನಿ ಚ ।
ಕಿಂ ನೋ ರಾಜ್ಯೇನ ಗೋವಿಂದ
ಕಿಂ ಭೋಗೈರ್ಜೀವಿತೇನ ವಾ ॥ 32

ಕೃಷ್ಣ, ನನಗೆ ಗೆಲ್ಲುವ ಬಯಕೆ ಇಲ್ಲ. ನನಗೆ ರಾಜ್ಯವೂ ಬೇಡ, ಸುಖಗಳೂ ಬೇಡ. ಗೋವಿಂದ ಇಂಥ ರಾಜ್ಯದಿಂದಾಗಲಿ, ಭೋಗಗಳಿಂದಾಗಲಿ, ಬದುಕಿನಿಂದಲೇ ಆಗಲಿ, ಏನು ಪ್ರಯೋಜನ?

ಯೇಷಾಮರ್ಥೇ ಕಾಂಕ್ಷಿತಂ ನೋ
ರಾಜ್ಯಂ ಭೋಗಾಃ ಸುಖಾನಿ ಚ ।
ತ ಇಮೇಽವಸ್ಥಿತಾ ಯುದ್ಧೇ
ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥ 33

ಯಾರಿಗಾಗಿ ನಾವು ರಾಜ್ಯವನ್ನೂ ಭೋಗಗಳನ್ನೂ ಸುಖಗಳನ್ನೂ ಬಯಸಿದೆವೋ, ಆ ಮಂದಿಯೆಲ್ಲ ಜೀವದಾಸೆಯನ್ನೂ ಸಿರಿಯನ್ನೂ ತೊರೆದು ಇಲ್ಲಿ ಕಾದುವುದಕ್ಕೆ ನಿಂತಿದ್ದಾರೆ.

ಆಚಾರ್ಯಾಃ ಪಿತರಃ ಪುತ್ರಾಃ
ತಥೈವ ಚ ಪಿತಾಮಹಾಃ ।
ಮಾತುಲಾಃ ಶ್ವಶುರಾಃ ಪೌತ್ರಾಃ
ಸ್ಯಾಲಾಃ ಸಂಬಂಧಿನಸ್ತಥಾ ॥ 34

ಗುರುಗಳು, ಪಿತೃತುಲ್ಯರು, ಮಕ್ಕಳು, ಅಜ್ಜಂದಿರು ಸೋದರಮಾವಂದಿರು, ಮಾವಂದಿರು, ಮೊಮ್ಮಕ್ಕಳು, ಭಾವಮೈದುನರು, ಅದರಂತೆ ಬೇರೆ ಬೇರೆ ಸಂಬಂಧವುಳ್ಳವರು ಇಲ್ಲಿ ಎದುರು ನಿಂತಿದ್ದಾರೆ.

ಏತಾನ್ನ ಹಂತುಮಿಚ್ಛಾಮಿ
ಘ್ನತೋಽಪಿ ಮಧುಸೂದನ ।
ಅಪಿ ತ್ರೈಲೋಕ್ಯ ರಾಜಸ್ಯ
ಹೇತೋಃ ಕಿಂ ನು ಮಹೀಕೃತೇ ॥ 35

ಕೃಷ್ಣ, ಅವರಿಂದ ನಾನು ಹೊಡೆಸಿಕೊಂಡರೂ ಸರಿ, ಮೂರು ಲೋಕಗಳೇ ದೊರೆಯುವುವೆಂದರೂ ಇವರನ್ನು ಹೊಡೆಯಲಾರೆ. ಇನ್ನು ಈ ನೆಲಕ್ಕಾಗಿ ಹೊಡೆದೇನೆ ?

ನಿಹತ್ಯ ಧಾರ್ತರಾಷ್ಟ್ರಾನ್ನಃ
ಕಾ ಪ್ರೀತಿಃ ಸ್ಯಾಜ್ಜನಾರ್ದನ ।
ಪಾಪಮೇವಾಶ್ರಯೇದಸ್ಮಾನ್
ಹತ್ವೈತಾನಾತತಾಯಿನಃ ॥ 36

ಕೃಷ್ಣ, ಕೌರವರನ್ನು ಕೊಂದು ನಮಗೇನು ತೃಪ್ತಿ? ಈ ಕೇಡಿಗರನ್ನು ಕೊಲ್ಲುವುದರಿಂದ ನಮಗೆ ಪಾಪವೇ ಗಂಟುಬಿದ್ದೀತು.

ತಸ್ಮಾನ್ನಾರ್ಹಾ ವಯಂ ಹಂತುಂ
ಧಾರ್ತರಾಷ್ಟ್ರಾನ್ ಸಬಾಂಧವಾನ್ ।
ಸ್ವಜನಂ ಹಿ ಕಥಂ ಹತ್ವಾ
ಸುಖಿನಃ ಸ್ಯಾಮ ಮಾಧವ ॥ 37

ಆದ್ದರಿಂದ ನಮ್ಮವರಾದ ಕೌರವರನ್ನು ನಾವು ಕೊಲ್ಲಬಾರದು. ಮಾಧವ, ನಮ್ಮವರನ್ನೇ ಕೊಂದು ನಾವು ಹೇಗೆ ಸುಖಿಗಳಾಗುವೆವು ?

ಯದ್ಯಪ್ಯೇತೇ ನ ಪಶ್ಯಂತಿ
ಲೋಭೋಪಹತಚೇತಸಃ ।
ಕುಲಕ್ಷಯಕೃತಂ ದೋಷಂ
ಮಿತ್ರದ್ರೋಹೇ ಚ ಪಾತಕಮ್ ॥ 38

ಆಸೆಗೆ ಬಲಿಯಾಗಿ ಬುದ್ಧಿ ಕಳಕೊಂಡ ಈ ಮಂದಿ ಕುಲನಾಶದ ಕೆಟ್ಟ ಪರಿಣಾಮವನ್ನೂ ಗೆಳೆಯರಿಗೆ ಎರಡು ಬಗೆದ ಪಾಪವನ್ನೂ ಅರ್ಥಮಾಡಿಕೊಳ್ಳುತ್ತಿಲ್ಲ, ನಿಜ ;

ಕಥಂ ನ ಜ್ಞೇಯಮಸ್ಮಾಭಿಃ
ಪಾಪಾದಸ್ಮಾನ್ನಿವರ್ತಿತುಮ್ ।
ಕುಲಕ್ಷಯಕೃತಂ ದೋಷಂ
ಪ್ರಪಶ್ಯದ್ಭಿರ್ಜನಾರ್ದನ ॥ 39

ಆದರೆ ಓ ಜನಾರ್ದನ, ಕುಲ ನಾಶದ ದುರಂತವನ್ನು ತಿಳಿದ ನಮಗೆ ಈ ಪಾಪದಿಂದ ಹಿಮ್ಮೆಟ್ಟಬೇಕೆಂದು ತಿಳಿಯದಿರುವುದು ಹೇಗೆ?

ಕುಲಕ್ಷಯೇ ಪ್ರಣಶ್ಯಂತಿ
ಕುಲಧರ್ಮಾಃ ಸನಾತನಾಃ ।
ಧರ್ಮೇ ನಷ್ಟೇ ಕುಲಂ
ಕೃತ್ಸ್ನಂ ಅಧರ್ಮೋಽಭಿಭವತ್ಯುತ ॥ 40

ಕುಲ ನಾಶವಾದರೆ ಬಹುಕಾಲದಿಂದ ನಡೆದು ಬಂದ ಕುಲಧರ್ಮಗಳೆಲ್ಲ ಹೋಗಿ ಬಿಡುವುವು, ಕುಲಧರ್ಮ ಹಾಳಾದರೆ ಕುಲವನ್ನೆಲ್ಲ ಅಧರ್ಮವು ಆಕ್ರಮಿಸಿ ಬಿಡುವುದು.

ಅಧರ್ಮಾಭಿಭವಾತ್ಕೃಷ್ಣ
ಪ್ರದುಷ್ಯಂತಿ ಕುಲಸ್ತ್ರಿಯಃ ।
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ
ಜಾಯತೇ ವರ್ಣಸಂಕರಃ ॥ 41

ಕೃಷ್ಣ, ಅಧರ್ಮದ ಆಕ್ರಮಣದಿಂದ ಕುಲೀನ ಹೆಂಗಸರು ಕೆಡುವರು. ಹೆಂಗಸರು ಕೆಟ್ಟರೆ ಸಮಾಜ ಬಣ್ಣಗೆಡುತ್ತದೆ.

ಸಂಕರೋ ನರಕಾಯೈವ
ಕುಲಘ್ನಾನಾಂ ಕುಲಸ್ಯ ಚ ।
ಪತಂತಿ ಪಿತರೋ ಹ್ಯೇಷಾಂ
ಲುಪ್ತಪಿಂಡೋದಕಕ್ರಿಯಾಃ ॥ 42

ಇಂಥ ಬೆರಕೆ ಸಮಾಜ, ಕುಲವನ್ನೂ ಕುಲಕಂಟಕರನ್ನೂ ಜೊತೆಗೇಯೇ ನರಕಕ್ಕೆ ತಳ್ಳುತ್ತದೆ. ಅದರಿಂದ ಇಂಥವರ ಹಿರಿಯರು ಪಿಂಡಪ್ರದಾನ, ಜಲತರ್ಪಣ ಇಲ್ಲದವರಾಗಿ ಕೆಳಕ್ಕೆ ಬೀಳುವರು.

ದೋಷೈರೇತೈಃ ಕುಲಘ್ನಾನಾಂ .
ವರ್ಣಸಂಕರಕಾರಕೈಃ ।
ಉತ್ಸಾದ್ಯಂತೇ ಜಾತಿಧರ್ಮಾಃ
ಕುಲಧರ್ಮಾಶ್ಚ ಶಾಶ್ವತಾಃ ॥ 43

ಸಮಾಜದ ವ್ಯವಸ್ಥೆಯನ್ನು ಕೆಡಿಸುವ ಇಂಥ ಈ ಕುಲನಾಶಕರ ದೋಷಗಳಿಂದಾಗಿ ನಿರಂತರವಾಗಿ ನಡೆದು ಬಂದ ಜಾತಿಧರ್ಮಗಳೂ ಕುಲಧರ್ಮಗಳೂ ನಿರ್ಮೂಲವಾಗುತ್ತವೆ.

ಉತ್ಸನ್ನಕುಲಧರ್ಮಾಣಾಂ
ಮನುಷ್ಯಾಣಾಂ ಜನಾರ್ದನ ।
ನರಕೇ ನಿಯತಂ ವಾಸೋ
ಭವತೀತ್ಯನುಶುಶ್ರುಮ ॥ 44

ಜನಾರ್ದನ, ಕುಲಧರ್ಮಗಳನ್ನೆಲ್ಲ ಹಾಳುಮಾಡಿಕೊಂಡ ಮನುಷ್ಯರು ಯಾವಾಗಲೂ ನರಕದಲ್ಲಿರಬೇಕಾಗುವುದೆಂದು ಕೇಳಿದ್ದುಂಟು.

ಅಹೋ ಬತ ಮಹತ್ಪಾಪಂ
ಕರ್ತುಂ ವ್ಯವಸ್ಥಿತಾ ವಯಮ್ ।
ಯದ್ರಾಜ್ಯಸುಖಲೋಭೇನ
ಹಂತುಂ ಸ್ವಜನಮುದ್ಯತಾಃ ॥ 45

ರಾಜ್ಯದಿಂದ ಲಭಿಸುವ ಸುಖದ ಮೋಹದಿಂದ ನಮ್ಮವರನ್ನೇ ಕೊಲ್ಲಹೊರಟಿರುವ ನಾವು, ಆಹಾ! ಎಂಥ ದೊಡ್ಡ ಪಾಪವನ್ನು ಮಾಡುವುದಕ್ಕೆ ಹೊರಟಿರುವೆವು

ಯದಿ ಮಾಮಪ್ರತೀಕಾರಂ
ಅಶಸ್ತ್ರಂ ಶಸ್ತ್ರಪಾಣಯಃ ।
ಧಾರ್ತರಾಷ್ಟ್ರಾ ರಣೇ ಹನ್ಯುಃ
ತನ್ಮೇ ಕ್ಷೇಮತರಂ ಭವೇತ್ ॥ 46

ಒಂದು ವೇಳೆ ಹೋರಾಡಬಯಸದೆ ನಿರಾಯುಧನಾಗಿ ನಿಂತ ನನ್ನನ್ನು ಆಯುಧಪಾಣಿಗಳಾದ ಕೌರವರು ಯುದ್ಧದಲ್ಲಿ ಕೊಂದರೆ ಅದರಿಂದ ನನಗೆ ಹೆಚ್ಚಿನ ಒಳ್ಳೆಯದೇ ಆದೀತು.

ಸಂಜಯ ಉವಾಚ :

ಏವಮುಕ್ತ್ವಾರ್ಜುನಃ ಸಂಖ್ಯೇ
ರಥೋಪಸ್ಥ ಉಪಾವಿಶತ್ ।
ವಿಸೃಜ್ಯ ಸಶರಂ ಚಾಪಂ
ಶೋಕಸಂವಿಗ್ನಮಾನಸಃ ॥ 47

ಸಂಜಯ : ದುಃಖದಿಂದ ತಳಮಳಗೊಂಡ ಅರ್ಜುನನು ಹೀಗೆ ಹೇಳಿ ಬಿಲ್ಲುಬಾಣವನ್ನು ಕೆಳಕ್ಕೆ ಚೆಲ್ಲಿ ರಣರಂಗದಲ್ಲಿ ರಥದಲ್ಲೇ ಕುಳಿತುಬಿಟ್ಟನು.

ಇತಿ

ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಅರ್ಜುನವಿಷಾದಯೋಗೋ ನಾಮ ಪ್ರಥಮೋಽಧ್ಯಾಯಃ

1 ನೆಯ ಅಧ್ಯಾಯವು ಮುಗಿದುದು.

— ಸಶೇಷ

# ವಿಜಯನಗರ ಕಾಲದ ದ್ವೈತ ದರ್ಶನ ಗ್ರಂಥಗಳು

ಕಾಲದೃಷ್ಟಿಯಿಂದ ಮತತ್ರಯ ದರ್ಶನಗಳಲ್ಲಿ ದ್ವೈತ ದರ್ಶನ ಮೂರನೆಯದು. ಇದನ್ನು ಸ್ಥಾಪಿಸಿದವರು ಶ್ರೀಮನ್ಮಧ್ವಾಚಾರ್ಯರವರು. ಇವರ ಮೂಲ ನಾಮಧೇಯ ವಾಸುದೇವನೆಂದು. ಉಡುಪಿಯ ಸಮೀಪದಲ್ಲಿರುವ ಶಿವರೂಪ್ಯಗ್ರಾಮದಲ್ಲಿ 1199 ರಲ್ಲಿ ಜನಿಸಿದರು. ಮಧ್ಯಗೇಹಭಟ್ಟರು ಇವರ ತಂದೆಯವರು. ಅಚ್ಯುತ ಪ್ರೇಕ್ಷಾಚಾರ್ಯರು ಇವರ ಅಧ್ಯಾತ್ಮಗುರುಗಳು. ಇವರು ಶಂಕರರ ಅದ್ವೈತಮತವನ್ನು ಖಂಡನ ಮಾಡಿ ದ್ವೈತ ಮತವನ್ನು ಸ್ಥಾಪಿಸಿದರು. ಅವರು ಸಂನ್ಯಾಸಿಗಳಾದ ಮೇಲೆ ಅವರಿಗೆ ಆನಂದ ತೀರ್ಥರೆಂಬ ನಾಮಧೇಯವಾಯಿತು, ಪೂರ್ಣಪ್ರಜ್ಞ, ಮಧ್ವಮಂದಾರ, ಮಾಧ್ವ ಎಂಬುದು ಅವರ ಬಿರುದುಗಳು. ಇವರ ಸಿದ್ಧಾಂತದ ಪ್ರಕಾರ ಹರಿಯೇ ಸರ್ವೋತ್ತಮನು. ಜಗತ್ತು ಸತ್ಯವಾದುದು, ಜೀವ ವರ್ಗಗಳು ಭಿನ್ನವಾದುವು. ಚೇತನ ಅಚೇತನ ಈಶ್ವರರಿಗಿರುವ ಭೇದವು ಸತ್ಯವಾದುದು. ಸಕಲ ಜೀವರೂ ಹರಿಗೆ ದಾಸಭೂತರು. ಜೀವರು ಪರಸ್ಪರ ನೀಚೋಚ್ಚಭಾವವುಳ್ಳವರು. ನೈಜಸುಖಾನುಭಾವವೇ ಮುಕ್ತಿ. ಶುದ್ಧ ಭಕ್ತಿಯೇ ಉಪಾಯ. ಪ್ರತ್ಯಕ್ಷಾದಿ ಪ್ರಮಾಣಗಳು ಮೂರು. ವೇದಗಳಲ್ಲಿ ಪ್ರತಿಪಾದಿತನಾದವನು ಶ್ರೀಹರಿ. ಈ ಸಿದ್ಧಾಂತ ಸ್ಥಾಪನೆಗಾಗಿ ಶ್ರೀಮಧ್ವಾಚಾರ್ಯರು 37 ಗ್ರಂಥಗಳನ್ನು ರಚಿಸಿರುವುದಾಗಿ ಪ್ರತೀತಿ. ಇವುಗಳಿಗೆ ಸರ್ವಮೂಲಗಳೆಂದು ಹೆಸರು. ಇವುಗಳಲ್ಲಿ ಹತ್ತು ಪ್ರಕರಣಗಳು. ಕೆಲವು ಆಚಾರ ಗ್ರಂಥಗಳು, ಕೆಲವು ಸಿದ್ಧಾಂತ ಗ್ರಂಥಗಳು ಮತ್ತೆ ಕೆಲವು ಪ್ರಸ್ಥಾನತ್ರಯಗಳ ಭಾಷ್ಯಗಳು. ಮಧ್ವಾಚಾರ್ಯರ ಗ್ರಂಥಗಳಲ್ಲಿ ಪ್ರಧಾನವಾದವು ದಶೋಪನಿಷದ್ಭಾಷ್ಯಗಳು. 'ಬ್ರಹ್ಮಸೂತ್ರ ಭಾಷ್ಯ', 'ಬ್ರಹ್ಮಸೂತ್ರಾಣುವ್ಯಾಖ್ಯಾನ', 'ಭಗವದ್ಗೀತಾಭಾಷ್ಯ', 'ಭಗವದ್ಗೀತಾ ತಾತ್ಪರ್ಯ ನಿರ್ಣಯ' – ಇವು ಮುಖ್ಯವಾದುವು. ಅಲ್ಲದೆ ಅವರು 'ಋಗ್ಭಾಷ್ಯ', 'ತತ್ತ್ವವಿವೇಕ', 'ತತ್ತ್ವ ಸಂಖ್ಯಾನ', 'ತತ್ತ್ವೋದ್ಯೋತ', ಪ್ರಪಂಚ ಮಿಥ್ಯಾತ್ವ ಖಂಡನ, 'ಪ್ರಮಾಣ ಲಕ್ಷಣ', 'ಮಹಾ ಭಾರತ ತಾತ್ಪರ್ಯ ನಿರ್ಣಯ', 'ಭಾಗವತವ್ಯಾಖ್ಯಾನ', 'ವಿಷ್ಣು ತತ್ತ್ವನಿರ್ಣಯ' ಎಂಬ ಗ್ರಂಥಗಳನ್ನು ರಚಿಸಿದ್ದಾರೆ.

ಪದ್ಮನಾಭತೀರ್ಥ, ಅಕ್ಷೋಭ್ಯತೀರ್ಥ, ನರಹರಿತೀರ್ಥ, ಉಪೇಂದ್ರತೀರ್ಥ ಎಂಬುವರು ಮಧ್ವಾಚಾರ್ಯರ ಶಿಷ್ಯರು. ಮಾಧ್ವತತ್ತ್ವಸಾರ ಸಂಗ್ರಹ ಎಂಬುದು ಅಕ್ಷೋಭ್ಯತೀರ್ಥರ ಕೃತಿ. ಇವರಿಗೂ ವಿಜಯನಗರದ ವಿದ್ಯಾರಣ್ಯರಿಗೂ ವೇದಾಂತದೇಶಿಕಾಚಾರ್ಯರ ನೇತೃತ್ವದಲ್ಲಿ ವಾಕ್ಯಾರ್ಥ ನಡೆಯಿತೆಂದು ಪ್ರತೀತಿ.

ಅಕ್ಷೋಭ್ಯತೀರ್ಥರ ಶಿಷ್ಯರು ಜಯತೀರ್ಥರು. ಇವರು ಸಾಮಾನ್ಯವಾಗಿ ಮಧ್ವಾಚಾರ್ಯರ ಎಲ್ಲ ಗ್ರಂಥಗಳಿಗೂ ಟೀಕೆಗಳನ್ನು ರಚಿಸಿದ್ದಾರೆ. ಇವರಿಗೆ ಟೀಕಾಚಾರ್ಯರೆಂದು ರೂಢನಾಮವುಂಟಾಗಿದೆ. ಈ ಪಂಥಕ್ಕೆ ಈಗಿರುವ ಪ್ರಾಶಸ್ತ್ಯವು ಇವರಿಂದಲೇ ಲಭಿಸಿದೆಯೆಂದು ಹೇಳಬಹುದು. ಇವರ ವ್ಯಾಖ್ಯಾನಗಳಲ್ಲಿ 'ನ್ಯಾಯಸುಧಾ', 'ಪಂಚಿಕಾ' 'ತತ್ತ್ವಪ್ರಕಾಶಿಕಾ', 'ಪ್ರಮೇಯ ದೀಪಿಕಾ',– ಇವು ಮುಖ್ಯವಾದುವು. 'ಪ್ರಮಾಣ ಪದ್ಧತಿ' ಮತ್ತು 'ವಾದಾವಳಿ' ಎಂಬುವು ಇವರ ಸ್ವತಂತ್ರ ಕೃತಿಗಳು. ಇವುಗಳಲ್ಲಿ ಎರಡನೆಯದು ಮಾಯಾವಾದದ ಖಂಡನಾತ್ಮಕವಾದುದು.

ಮುಂದೆ ಪ್ರಸಿದ್ಧರಾದವರು ವ್ಯಾಸರಾಯರು. ಮಧ್ವಮತವು ವಿಜಯನಗರದ ಸಾಳುವ ತುಳುವ ಮತ್ತು ಅರವೀಡು ರಾಜರ ಆಶ್ರಯದಲ್ಲಿ ವಿಶೇಷ ಅಭಿವೃದ್ಧಿಗೆ ಬಂದಿತು. ವ್ಯಾಸರಾಯರು ಕೃಷ್ಣದೇವರಾಯನ ಗುರು. ಅವನಿಗೆ ಕುಹೂಯೋಗವೆಂಬ ದುರ್ಯೋಗವು ಪ್ರಾಪ್ತವಾದಾಗ ತಾವೇ ಸಿಂಹಾಸನಾರೂಢರಾಗಿ ಅವನಿಗೆ ಬಂದಿದ್ದ ಅಪಮೃತ್ಯುವನ್ನು ಪರಿಹರಿಸಿದರು. ಇವರು ಬ್ರಹ್ಮಣ್ಯತೀರ್ಥ ಮತ್ತು ಶ್ರೀಪಾದರಾಜರ ಶಿಷ್ಯರು. ಪಕ್ಷಧರಮಿಶ್ರ, ಕಳಿಂಗದ ಬಸವಭಟ್ಟ, ವಿದ್ಯಾಧರ, ಚೈತನ್ಯ, ವಲ್ಲಭಾಚಾರ್ಯ ಮೊದಲಾದವರು ಇವರ ಸಮಕಾಲೀನರು. ಸಿದ್ಧಾಂತ ಸ್ಥಾಪನೆಗೆ ವ್ಯಾಸರಾಯರು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ 'ತರ್ಕತಾಂಡವ', 'ನ್ಯಾಯಾಮೃತ', 'ಭೇದೋಜ್ಜೀವನ' – ಮೊದಲಾದುವುಗಳೂ 'ಮಾಯಾವಾದ ಖಂಡನ' 'ಪ್ರಪಂಚ ಮಿಥ್ಯಾತ್ವಾನುಮಾನಖಂಡನ', 'ತತ್ತ್ವೋದ್ಯೋತ' ಉಪಾಧಿ ಖಂಡನ – ಮೊದಲಾದುವುಗಳಿಗೆ ವ್ಯಾಖ್ಯಾನಗಳೂ ಏತತ್ಕೃತವಾದುವು. ನ್ಯಾಯಾಮೃತವು ಅದ್ವೈತ ವೇದಾಂತಿಗಳಾದ ಚಿತ್ಸುಖರು ತಮ್ಮ ತತ್ತ್ವದೀಪಿಕೆಯಲ್ಲಿ ಪ್ರತಿಪಾದಿಸಿರುವ ಅಭಿಪ್ರಾಯವನ್ನು ಖಂಡಿಸುವುದು. ಈ ನ್ಯಾಯಾಮೃತವು ಮಧುಸೂದನ ಸರಸ್ವತಿಯವರಿಂದ ಅವರ 'ಅದ್ವೈತ ಸಿದ್ಧಿ'ಯಲ್ಲಿ ಖಂಡಿಸಲ್ಪಟ್ಟಿದೆ. ಪುನಃ ಅದು ರಾಮ ತೀರ್ಥರ 'ನ್ಯಾಯಾಮೃತತರಂಗಿಣಿ'ಯಿಂದ ಖಂಡಿತವಾಯಿತು. ಜಯತೀರ್ಥರ ಪ್ರಪಂಚಮಿಥ್ಯಾನುಮಾನ ಖಂಡನ ವ್ಯಾಖ್ಯಾನಕ್ಕೆ 'ಭಾವ ಪ್ರಕಾಶಿಕೆ'ಯೆಂದು ಹೆಸರು. 'ತತ್ತ್ವಪ್ರಕಾಶಿಕೆ'ಯ ಭಾಷ್ಯಕ್ಕೆ 'ತಾತ್ಪರ್ಯಚಂದ್ರಿ'ಕೆಯೆಂದು ಹೆಸರು. ತತ್ತ್ವ ಪ್ರಕಾಶವು ಮಧ್ವಾಚಾರ್ಯರ ಸೂತ್ರಭಾಷ್ಯದ ವ್ಯಾಖ್ಯಾನ. ಪ್ರಾಚೀನ ಗ್ರಂಥಗಳಲ್ಲಿ ಅನಿರ್ದಿಷ್ಟವಾಗಿ ಉಳಿದಿದ್ದ ವಿಷಯಗಳನ್ನು 'ಚಂದ್ರಿಕೆ' ಸ್ಪಷ್ಟಪಡಿಸುತ್ತದೆ. ಪ್ರತಿಪಕ್ಷದವರ ಆಕ್ಷೇಪಗಳನೇಕವುಗಳಿಗೆ ಇಲ್ಲಿ ಸಮಾಧಾನವು ಸಿಕ್ಕುತ್ತದೆ. ದ್ವೈತ ಸಿದ್ಧಾಂತದ ಪ್ರಕಾರ್ಯನ್ಯಾಯವಾದಿಗಳಿಗೆ ಸಂಬಂಧಿಸಿದ ಕೆಲವು ಮುಖ್ಯವಿಷಯಗಳನ್ನು ವಿವೇಚಿಸುವ ವಿವರಣಗ್ರಂಥ 'ತರ್ಕತಾಂಡವ'.

ವ್ಯಾಸರಾಯರ ಸಾಕ್ಷಾತ್ ಶಿಷ್ಯರು ವಾದಿರಾಜರು. ಇವರು ಅಳಿಯ ರಾಮರಾಜನ ಕಾಲದಲ್ಲಿ ಗ್ರಂಥ ರಚನೆಮಾಡಿದಂತೆ ಕಾಣುತ್ತದೆ. 'ಗುರ್ವರ್ಥದೀಪಿಕೆ' 'ಪ್ರಮೇಯ ಸಂಗ್ರಹ' 'ಗುರುರಾಜೀಯ' 'ತಾತ್ಪರ್ಯ ಪ್ರಕಾಶಿಕಾ', 'ಈಶಾಭಾಷ್ಯ ಟೀಕಾ', 'ತಂತ್ರಸಾರಟೀಕಾ', 'ಲಕ್ಷಾಭರಣ', 'ಸರಸ ಭಾರತವಿಲಾಸ', 'ರುಕ್ಮಿಣೀವಿಜಯ', 'ಯುಕ್ತಿ ಮಲ್ಲಿಕಾ', 'ಪಾಷಂಡ ಮತಖಂಡನ', 'ನ್ಯಾಯರತ್ನಾವಳಿ', 'ಭೂಗೋಲವಿವರಣ', 'ಚಕ್ರಮೀಮಾಂಸಾ', 'ಹರಿಭಕ್ತಿಸಾರ', 'ಕಲ್ಪಲತಾ', 'ಗೀತಾವ್ಯಾಖ್ಯಾನವಿವರಣ,' 'ಶ್ರುತಿಕಾಲಪ್ರಕಾಶಿಕಾ', 'ಏಕಾದಶೀನಿರ್ಣಯ', 'ಸಂಕಲ್ಪಪದ್ಧತಿ', 'ವಾಯುಸ್ತುತಿ' 'ಪುರಶ್ಚರಣವಿಧಾನ' ಮೊದಲಾದವು ವಾದಿರಾಜರ ಕೃತಿಗಳು.

ನಾರಾಯಣಕೃತವಾದ ರಾಘವೇಂದ್ರ ವಿಜಯದ ಎರಡನೆಯ ಸರ್ಗದ ಒಂದು ಶ್ಲೋಕದಿಂದ ವಿಜಯೀಂದ್ರ ತೀರ್ಥರು ರಾಮರಾಯನ ಆಸ್ಥಾನದಲ್ಲಿ ವಿದ್ವತ್ಪ್ರದರ್ಶನದಿಂದ ಕನಕಾಭಿಷಿಕ್ತರಾದಂತೆ

ಡಾ॥ ಎನ್. ಅನಂತರಂಗಾಚಾರ್

ತೋರುತ್ತದೆ. ನೀಲಕಂಠದೀಕ್ಷಿತರ 'ಶಿವಲೀಲಾರ್ಣವ'ದಲ್ಲಿ ಇವರು ಪ್ರಸಿದ್ಧ ಶೈವ ವಿದ್ವಾಂಸರಾದ ಅಪ್ಪಯ್ಯದೀಕ್ಷಿತರ ಸಮಕಾಲೀನರೆಂದು ಹೇಳಿದೆ. ಇವರು 104 ಗ್ರಂಥಗಳನ್ನು ರಚಿಸಿದ್ದಾರೆ. ಇವುಗಳಲ್ಲಿ 'ಯುಕ್ತ್ಯಶ್ನ' 'ಭೇದವಿದ್ಯಾವಿಲಾಸ', 'ನಯಮುಕುರ', 'ಮೀಮಾಂಸಾ ನ್ಯಾಯಮಾಲಾ' 'ಅಧಿಕರಣಮಾಲಾ', 'ನಯಚಂಪಕಮಾಲಾ' 'ಪರತತ್ತ್ವಪ್ರಕಾಶಿಕಾ','ಅಪ್ಪಯ್ಯಕಪೋಲ ಚಪೇಟಿಕಾ', 'ಪ್ರಮೇಯ ದೀಪಿಕಾಟೀಕಾ', 'ಉಪನಿಷತ್ ಪ್ರಸ್ಥಾನಟೀಕಾ', 'ನಯಮಂಜರಿ', 'ಆಮೋದ', 'ನಾರಾಯಣ ಶಬ್ದಾರ್ಥವಚನ', 'ಬ್ರಹ್ಮಸೂತ್ರಾರ್ಥ ಸಂಗ್ರಹ', 'ಕಂಟಕೋದ್ಧಾರ', 'ಚಕ್ರಮೀಮಾಂಸಾ', 'ಮಾಧವತಂತ್ರಭೂಷಣ', 'ಉಪಸಂಹಾರವಿಜಯ', 'ಪ್ರಮಾಣಪದ್ಧತಿ ಟೀಕಾ', 'ನ್ಯಾಯದೀಪಿಕಾಟೀಕಾ' 'ಮಾಯಾವಾದ ಖಂಡನ ಟೀಕಾ' ಇವು ಮುಖ್ಯವಾದುವು.

ಇದೇ ಪಂಥಕ್ಕೆ ಸೇರಿದ ಉತ್ತರಾದಿ ಮಠದ ವಿದ್ಯಾಧೀಶರು 'ವಿಷ್ಣು ತತ್ತ್ವನಿರ್ಣಯ', 'ಏಕಾದಶೀನಿರ್ಣಯ', 'ವಿಷ್ಣು ಪಂಚಕೋಪವಾಸ ನಿರ್ಣಯ', 'ಸುಧಾ','ದ್ವೈತವಾದಾರ್ಥ','ತಲವಕಾರ ಖಂಡಾರ್ಥ', 'ಓಂಕಾರವಾದಾರ್ಥ', 'ತಿಥಿತ್ರಯನಿರ್ಣಯ', – ಇವುಗಳಿಗೆ ವ್ಯಾಖ್ಯಾನವನ್ನು ರಚಿಸಿದ್ದಾರೆ. ವಿಜಯೀಂದ್ರರ ಉತ್ತರಾಧಿಕಾರಿಯಾದ ರಾಘವೇಂದ್ರತೀರ್ಥರು ಚತುರ್ವೇದಗಳಿಗೂ ವ್ಯಾಖ್ಯಾನವನ್ನು ರಚಿಸಿರುವಂತೆ ಪ್ರತೀತಿ. ಅವಲ್ಲದೆ ಅವರು 32 ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ಪರಿಮಳ ಚಂದ್ರಿಕಾಪ್ರಕಾಶ', 'ನ್ಯಾಯ ಮುಕ್ತಾವಳಿ', 'ತತ್ತ್ವಮಂಜರಿ', 'ಭಾವದೀಪಿಕಾ', 'ದಶಪ್ರಕರಣಟೀಕಾ', 'ದಶೋಪನಿಷತ್ ಖಂಡಾರ್ಥ', 'ತಂತ್ರದೀಪಿಕಾ', 'ಅಣುಭಾಷ್ಯಟೀಕಾ', 'ಈಶಾವಾಸ್ಯವಿವೃತಿ', 'ಅಥರ್ವವಿವೃತಿ', 'ಭೇದ ಬೋಧಿನಿ', 'ತರ್ಕತಾಂಡವ ಟಿಪ್ಪಣಿ', 'ರಾಮಕೃಷ್ಣ ಮಂಜರಿ'–ಮುಂತಾದವು ಮುಖ್ಯವಾದವು. ವ್ಯಾಸರಾಜರ ಮತ್ತು ರಘುನಾಥತೀರ್ಥರ ಸಮಕಾಲೀನರಾದವರು ಆರ್ಯವಂಶದ ವರದರಾಜಾಚಾರ್ಯರು. ಇವರು ಆನಂದತೀರ್ಥರ 'ಮಹಾಭಾರತ ತಾತ್ಪರ್ಯನಿರ್ಣಯ'ಕ್ಕೆ 'ವರದರಾಜೀಯ'ವೆಂಬ ಟಿಪ್ಪಣಿಯನ್ನೂ ಅವರ ಮಗ ನರಹರಿಯು 'ಭಾಗವತ ತಾತ್ಪರ್ಯನಿರ್ಣಯ', 'ವಿಷ್ಣು ಪುರಾಣ', 'ಸ್ಮೃತಿ ಕೌಸ್ತುಭ'ಗಳಿಗೆ ಟಿಪ್ಪಣಿಯನ್ನು ರಚಿಸಿದ್ದಾರೆ. ಇವರೇ ಅಲ್ಲದೆ ಈ ಪಂಥಕ್ಕೆ ಸೇರಿದ ಯಾದವಾರ್ಯ, ಶ್ರೀನಿವಾಸ ತೀರ್ಥ, ಪಾಂಡುರಂಗೀ ಆನಂದಭಟ್ಟ, ಶೃಂಗೇರಿ ಶ್ರೀನಿವಾಸ ವ್ಯಾಸಾಚಾರ್ಯ, ನರಸಿಂಹ ಮೊದಲಾದವರು ಟೀಕೆ, ಟಿಪ್ಪಣಿ, ವ್ಯಾಖ್ಯಾನಗಳನ್ನು ಈ ಕಾಲದ ರಚಿಸಿ ದ್ವೈತ ದರ್ಶನ ಗ್ರಂಥ ಭಂಡಾರವನ್ನು ಬಹು ಸಮೃದ್ಧವನ್ನಾಗಿ ಮಾಡಿದ್ದಾರೆ.

ಮಾಧ್ವರಿಗೆ ಹರಿದಾಸರೆಂಬ ಪರ್ಯಾಯನಾಮಧೇಯವೂ ಉಂಟು. ಹರಿದಾಸರಲ್ಲಿ ದಾಸರು ಮತ್ತು ವ್ಯಾಸರು ಎಂಬ ಎರಡು ಪಂಗಡಗಳಿವೆ. ಸಾಮಾನ್ಯವಾಗಿ ಕನ್ನಡ ಭಾಷೆಯಲ್ಲಿ ಮಧ್ವ ಮತ ತತ್ತ್ವಗಳನ್ನು ಬೋಧಿಸಿದವರಿಗೆ ದಾಸರೆಂದೂ ಸಂಸ್ಕೃತದಲ್ಲಿ ಮೂಲ ಗ್ರಂಥಗಳನ್ನು ರಚಿಸಿದವರಿಗೆ ವ್ಯಾಸರೆಂದೂ ಸಂಜ್ಞೆ. ಹರಿದಾಸರಲ್ಲಿ ಮಾಧ್ವರಿಗಾಗಿ ಕೆಲವರು ಸಾಂಪ್ರದಾಯಕ ಗ್ರಂಥಗಳನ್ನು ರಚಿಸಿರುವರು. ಇವರಲ್ಲಿ ವಿಜಯದಾಸ, ಜಗನ್ನಾಥದಾಸ, ವೆಂಕಟದಾಸ ಇವರು ಮುಖ್ಯರು. ಕೆಲವರು ಹಿಂದೂ ಧರ್ಮದ ತತ್ತ್ವಗಳನ್ನು ಬ್ರಾಹ್ಮಣರ ಉಪಯೋಗಕ್ಕಾಗಿ ರಚಿಸಿರುವರು. ಇವರಲ್ಲಿ ವ್ಯಾಸರಾಯ, ಗೋಪಾಲದಾಸ ಮುಂತಾದವರು ಪ್ರಧಾನರು. ಮತ್ತೆ ಕೆಲವರು ಎಲ್ಲ ಜನರಿಗೂ ಅನ್ವಯಿಸುವ ಧಾರ್ಮಿಕ ಮತ್ತು ನೈತಿಕತತ್ತ್ವಗಳನ್ನು ಬೋಧಿಸಿರುವರು. ಇವರಲ್ಲಿ ಶ್ರೀಪಾದರಾಜ, ಪುರಂದರದಾಸ ಮತ್ತು ಕನಕದಾಸರು ಪ್ರಖ್ಯಾತರು. ಇವರುಗಳು ಶಿಕ್ಷಣದ ಗಂಧವಿಲ್ಲದ ಪಾಮರರಿಗೂ ಕೂಡ ಸುಲಭವಾಗಿ ತಿಳಿಯುವಂತೆ ಗಹನವಾದ ಆಧ್ಯಾತ್ಮಿಕ ವಿಷಯಗಳನ್ನು ಪದ, ದೇವರನಾಮ, ಸುಳಾದಿ, ತತ್ತ್ವ ಸುವ್ವಾಲೆ, ತ್ರಿಪದಿ, ಕಂದವಚನ, ಊಗಾಭೋಗ, ಕೀರ್ತನೆ ಮೊದಲಾದುವುಗಳ ರೂಪದಲ್ಲಿ ಜನಸಾಮಾನ್ಯರಲ್ಲಿ ಹರಡಿ ವಿಶೇಷ ಸಹಾಯಮಾಡಿದ್ದಾರೆ.

ದಾಸಕೂಟವನ್ನು ಮೊದಲು ಸ್ಥಾಪಿಸಿದವರು ಮಧ್ವಾಚಾರ್ಯರ ಶಿಷ್ಯರಾದ ನರಹರಿ ತೀರ್ಥರು. 'ರಘುಪತಿ' ಎಂಬ ಅಂಕಿತಗಳಲ್ಲಿ ಕೆಲವು ಪದಗಳನ್ನು ರಚಿಸಿದರು ಇದನ್ನು ಬೆಳೆಸಿದವರು ಶ್ರೀಪಾದರಾಜರು. ಇವರ ನಾಮಧೇಯ ಲಕ್ಷ್ಮೀನಾರಾಯಣ ಎಂದು. ಚನ್ನಪಟ್ಟಣದ ತಾಲೂಕಿನ ಅಬ್ಬೂರು ಇವರ ಸ್ಥಳ. ಮುಳಬಾಗಿಲಿನ ಮಠಾಧಿಪತಿಗಳಾಗಿ ಶ್ರೀರಂಗದಲ್ಲಿ ಕೆಲವು ಕಾಲ ಇದ್ದು ಅಲ್ಲಿ ದ್ರಾವಿಡ ಭಾಷೆಗಿದ್ದ ಪ್ರಾಶಸ್ತ್ಯವನ್ನು ಕಂಡು ಕನ್ನಡದಲ್ಲಿಯೂ ಗ್ರಂಥಗಳನ್ನು ರಚಿಸಬೇಕೆಂದು ಸಂಕಲ್ಪಿಸಿ ಅದಕ್ಕಾಗಿ ಒಂದು ಭಾಗವತರ ತಂಡವನ್ನೇ ಏರ್ಪಡಿಸಿದರು. ಪೂಜಾಕಾಲದಲ್ಲಿ ಭಾಗವತರಿಂದ ಕನ್ನಡದ ದೇವರನಾಮಗಳನ್ನು ಹಾಡಿಸಿ ಅವರೊಡನೆ ತಾವೂ ಹಾಡಿ ಆ ಭಾಷೆಗೆ ಪೂಜ್ಯತೆಯನ್ನುಂಟುಮಾಡಿದರು. ಇವರು 'ಭ್ರಮರಗೀತೆ', 'ವೇಣುಗೀತೆ'ಗಳನ್ನು ಹಾಡಿದ್ದಾರೆ. ಅವು ಲಯ ಬದ್ಧವಾಗಿಯೂ ಸುಸ್ವರವಾಗಿಯೂ ಸರಸ ಸಾಹಿತ್ಯದಿಂದ ಕೂಡಿರುವುದಾಗಿಯೂ ಇವೆ. ವಾಸ್ತವವಾಗಿ ಹೇಳುವುದಾದರೆ ದಾಸಸಾಹಿತ್ಯಕ್ಕೆ ಇವರೇ ಮೂಲ.

ಹರಿದಾಸರಲ್ಲಿ ಮುಂದೆ ಪ್ರಸಿದ್ಧರಾದವರು ವ್ಯಾಸರಾಯರು. ಇವರು ಬನ್ನೂರಿನವರು. ಇವರು ಅನೇಕ ದೇವರು ನಾಮಗಳನ್ನು ಹಾಡಿದ್ದಾರೆ. ಇವುಗಳಲ್ಲಿ ಬಹುಭಾಗ ಉಪಲಬ್ಧವಲ್ಲ. ಉಪಲಬ್ಧವಾಗಿರುವುವು ವಿವಿಧರಾಗ ತಾಲಗಳಲ್ಲಿ ರಚಿತವಾಗಿವೆ. ರಸಸೃಷ್ಟಿಯಿಂದ ಕೂಡಿವೆ. ವೃತ್ತಿನಾಮಗಳನ್ನು ರಚಿಸುವ ರೂಢಿ ಇವರ ಕಾಲದಲ್ಲಿ ಪ್ರಾರಂಭವಾಯಿತು.

ಕೀರ್ತನ ಕಾರರಲ್ಲಿ ಮುಂದೆ ಮಾರ್ಗದರ್ಶಕರಾದವರು ಪುರಂದರ ದಾಸರು. ಇವರು ವಿಜಯ

( 32ನೇ ಪುಟ ನೋಡಿ )

# ನರಸಿಂಹ ಸುಪ್ರಭಾತ

"ಕವಿತಾ ಕೃಷ್ಣ"

ಓಂ ನಮೋ ಲಕ್ಷ್ಮೀನೃಸಿಂಹ ದೇವರಾಯದುರ್ಗ ನಿವಾಸ
ಓಂ ನಮೋ ಪ್ರಹ್ಲಾದ ರಕ್ಷಕ ಹಿರಣ್ಯಕಶಿಪು ವಿನಾಶ
ಓಂ ನಮೋ ಪೆಭೂತರೂಪ ಸುಜ್ಞಾನ ಸುಧಾ ವಿಕಾಸ
ಓಂ ನಮೋ ಕರಿಗಿರಿ ನಾರಸಿಂಹ ಭಕ್ತಜನ ಸಂಪೋಷ ॥ 1 ॥

ನಮೋ ಕರುಣಾಗುಣ ಭರಿತ ವಿಧಾತ ಕೃಪಾಸಾಗರ
ನಮೋ ಅರ್ಧನರರೂಪಿ ಮಾತೆಭೂದೇವಿ ಪ್ರಿಯಕರ
ನಮೋ ನವತೀರ್ಥ ನಿರ್ಮಾಣ ಅಜಾನುಬಾಹು ಸುಂದರ
ನಮೋ ಕರಿಗಿರಿ ನಿವಾಸ ಶ್ರೀ ಲಕ್ಷ್ಮೀನೃಸಿಂಹ ಶ್ರೀಕರ ॥ 2 ॥

ಗರುಡಗಮನ ಶೇಷವಾಹನ ಹೇ ಕ್ಷೀರಸಾಗರವಾಸ
ವರ ಭೂದೇವಿ ಸೇವಿತಾ ಶ್ರೀದೇವಿ ಹೃದಯ ನಿವಾಸ
ಧರೆಯ ಭಾರವನಿಳುಹಿದ ದಶಾವತಾರಿ ಕರುಣಾವಿಲಾಸ
ಶರಣು ಕರಿಗಿರಿ ನಿವಾಸ ಶ್ರೀ ಲಕ್ಷ್ಮೀನೃಸಿಂಹ ಸುಪ್ರಕಾಶ ॥ 3 ॥

ದೇವದೇವನೆ ದಿವ್ಯರೂಪನೆ ನಮೋ ವ್ಯಾಘ್ರರೂಪಿ
ಪಾವನ ನಾಮನೆ ಅಸುರಾಂತಕನೆ ನಮೋ ವೀರಪ್ರತಾಪಿ
ಭವಭಯಹರನೆ ಪ್ರಹ್ಲಾದ ರಕ್ಷಕನೆ ದೇವಾ ರೌದ್ರರೂಪಿ
ದಿವಿಜರೊಡೆಯನೆ ನಮೋ ಶ್ರೀ ನೃಸಿಂಹ ಕಾಲಸ್ವರೂಪಿ ॥ 4 ॥

ನಿನ್ನ ಪಾದಗಳ ಬೆಳಗಲು ಮೂಡಣದಿ ಉದಯರವಿ ಮೂಡಿಹನು
ಬನದಿ ಹಕ್ಕಿಗಳೆಲ್ಲಾ ನಿನಗೆ ಸುಪ್ರಭಾತವ ಹಾಡುತಿಹವು
ನಿನ್ನ ಅಡಿಗಳಿಗೆರಗೆ ತುರುಲತೆ ತಲೆಬಾಗಿ ತೂಗುತಿಹವು
ಚಿನ್ಮಯ ಶ್ರೀ ಕರಿಗಿರಿ ನಾರಸಿಂಹ ಏಳು ಬೆಳಗಾಯಿತು ॥ 5 ॥

ಲಕುಮಿದೇವಿಯು ಮೊದಲೆದ್ದು ನಿನ್ನ ಪಾದವನರ್ಚಿಸಿಹಳು
ಬಕುಳ ಸಂಪಿಗೆ ಸುರಗಿ ಜಾಲಾರ ಪುಷ್ಪದಿ ಅಡಿಯ ತುಂಬಿಹಳು
ವಿಕಸಿತ ಕುಸುಮ ಮಾಲೆಗಳಂ ಕಟ್ಟಿ ಕಾದು ಕುಳಿತಿಹಳು
ಲೋಕೋದ್ಧಾರ ಕರಿಗಿರಿ ನಾರಸಿಂಹ ಏಳು ಬೆಳಗಾಯಿತು ॥ 6 ॥

ನಿನ್ನ ದರುಶನಕೆಂದು ದ್ವಿಜರು ಪುಣ್ಯತೀರ್ಥದಿ ಮಿಂದು
ನಿನ್ನ ಲೀಲಾ ಮಹಿಮೆಗಳನು ತುತಿಸುತಿಹರು ಭಕ್ತಿಭಾವದಿ ನಿಂದು
ನಿನ್ನ ಅಭಿಷೇಚಿಸಲು ಕರದಿ ಪೂರ್ಣಕಲಶವಾ ಪಿಡಿದು
ಕಾದಿಹರು ಕರಿಗಿರಿ ನಾರಸಿಂಹ ಏಳು ಬೆಳಗಾಯಿತು ॥ 7 ॥

ಗೋವುಗಳೆಲ್ಲ 'ಗೋವಿಂದ ರಕ್ಷೋ' ಎಂದು ಮೊರೆಯನಿಟ್ಟಿಹವು
ದೇವ ನಿನ್ನನೆಬ್ಬಿಸೆ ಹಕ್ಕಿಗಳು ಚಿಲಿಪಿಲಿಗಾನವಾ ಮಾಡುತಿಹವು
ಶ್ರೀವರ ಕೃಪಾಕರ ಶರಣೆಂದು ಉರಗಗಳು ನಲಿದಿಹವು
ದೇವದೇವಾ ಕರಿಗಿರಿ ನಾರಸಿಂಹ ಏಳು ಬೆಳಗಾಯಿತು ॥ 8 ॥



ಸುರರು ಕರಗಳಲಿ ಕರ್ಪೂರದಾರತಿಯ ಪಿಡಿದು ನಿಂದಿಹರು
ಚರರು ನಿನ್ನಯಾ ನಾಮ ಘೋಷಗಳ ಬಿಡದೆ ಪಾಡುತಿಹರು
ವರಮುನಿಗಣ ನಾರದಾದಿಗಳು ಗಾನಲಹರಿಯ ಕರೆಯುತಿಹರು
ಕರಣಾಕರ ಕರಿಗಿರಿ ನಾರಸಿಂಹ ಏಳು ಬೆಳಗಾಯಿತು ॥ 9 ॥

ನಾಮಚಿಲುಮೆಯಲಿ ದೇವಗಂಗೆ ಚಿಮ್ಮಿ ಹೊಮ್ಮುತಿಹಳು
ರಾಮನಾಮವನು ಸ್ಮರಿಸಿ ಕಾನನವ ತಂಪೇರಿಸಿಹಳು
ಭಾಮಿನಿಯರು ವನದ ಪರಿಪರಿ ಹೂಗಳ ಕೊಯ್ದು ತಂದಿಹರು
ಸ್ವಾಮಿ ದೇವಾ ಕರಿಗಿರಿ ನಾರಸಿಂಹ ಏಳು ಬೆಳಗಾಯಿತು ॥ 10 ॥

ಮುನಿದೂರ್ವಾಸರು ತಪವನೆಸಗಿದರಿಲ್ಲಿ ನಿನ್ನ ದರ್ಶನಕಾಗಿ
ವನಮಾಲಿ ನೀ ದರ್ಶನವಿತ್ತೆ ಲೋಕ ಕಲ್ಯಾಣಕ್ಕಾಗಿ
ದಾನಿಗಳಲಿ ದಾನಿ ನೀ ಎನೆ ಬಂದೆವು ನಿನ್ನಡಿಯ ಹೂವಾಗಿ
ದಾನವಾಂತಕ ವಿಜಯ ನಾರಸಿಂಹ ಏಳು ಬೆಳಗಾಯಿತು ॥ 11 ॥

ಇದ್ದರು. ಆತ ಅವ್ವನ ಬಗ್ಗೆ ಒಬ್ಬ ಬ್ರಾಹ್ಮಣನಿಗೆ ಹೇಳಿದ. 'ಈಕೆ ತೌರು ಮನೆ ಹೆಸರು ಭೀಮಾಬಾಯಿ, ಅತ್ತೆ ಮನೆ ಹೆಸರು ಕೃಷ್ಣಾಬಾಯಿ, ಈಕೆಗೆ ಒಂದು ಮುದ್ರಿಕೆ ದಯಪಾಲಿಸಿರಿ'. ಆ ಬ್ರಾಹ್ಮಣ ಸಾಕ್ಷಾತ್ ರುದ್ರದೇವರು. ಅವರು 'ಈ ಭೀಮೇಶ ಕೃಷ್ಣ ಎಂಬ ಮುದ್ರಿಕೆಯಿಂದ ಕೃತಿ ರಚನೆ ಮಾಡಲಿ. ಇದು ಹರಿವಾಯುಗಳ ನಾಮವಾಗಿದೆ' ಎಂದ. ಆಗಲೇ ಆಕೆ 'ಯಾತಕವನಿಯೊಳು ಜನಿಸಿದೆ ಕೋತಿ ಸಾರ್ಥಕೇನು' ಎಂದು ಪ್ರಾರಂಭಿಸಿ ವಾಯುದೇವರ ಅವತಾರತ್ರಯಗಳನ್ನು ವರ್ಣಿಸಿ ಭೀಮೇಶ ಕೃಷ್ಣ ಎಂದು ಮುಗಿಸಿದರು. ಹಾಡುಗಳೂ ಸಹಾ ಯಥೇಚ್ಛವಾಗಿ ಬರಲಾರಂಭಿಸಿದುವು. ಒಂದೇ, ಎರಡೇ; ರತಿ ಕಲ್ಯಾಣ, ಸುಭದ್ರಾ ಕಲ್ಯಾಣ, ಶ್ರೀಕೃಷ್ಣ ದಾನವ್ರತ. ನಳ ಚರಿತ್ರೆ, ಜಲಕ್ರೀಡೆ, ಸುದಾಮ ಚರಿತ್ರೆ, ಶುಕ್ರವಾರ – ಶನಿವಾರದ ಹಾಡುಗಳು, ಪೂಜೆ ಪುರಸ್ಕಾರ, ಉದಯರಾಗ, ಲಾಲಿ ಹಾಡು, ಇತ್ಯಾದಿ ದೊಡ್ಡ ದೊಡ್ಡ ಕಾವ್ಯಗಳೊಂದಿಗೇ ನಿತ್ಯೋಪಯೋಗಿಗಳಾದ ಸಣ್ಣ ಪುಟ್ಟ ಹಾಡುಗಳು.

ಭೀಮವ್ವನವರ ಹಾಡುಗಳಲ್ಲಿನ ವರ್ಣನೆ ಅದ್ಭುತ, ಕಲ್ಪನೆಗಿಂತಲೂ ಆಕೆ ದೃಶ್ಯಗಳನ್ನು ಸಾಕ್ಷಾತ್ತಾಗಿ ನೋಡಿಯೇ ಬರೆದಿರುವಳೆನ್ನಿಸುತ್ತದೆ. ಶ್ರೀದವರು ಆಕೆಗೆ ಅಸಂಖ್ಯಾಕ ಸ್ವಪ್ನಗಳಾಗುತ್ತಿದ್ದುದಾಗಿಯೂ, ಸ್ವಪ್ನದ ದೃಶ್ಯವನ್ನೇ ಕಂಡಂತೆ ಆಕೆ ಹಾಡುತ್ತಿದ್ದಳೆಂದೂ ಹೇಳುತ್ತಾರೆ. ನಾವು ಹರಪನಹಳ್ಳಿಗೆ ಹೋಗಿದ್ದಾಗ ಆಕೆಯ ಹತ್ತಿರ ಸಂಬಂಧಿಗಳೊಬ್ಬರ ಮನೆಯಲ್ಲಿ ಆಕೆಯ ಜೀವನ ಚರಿತ್ರೆಯ ಹಸ್ತ ಪ್ರತಿಯನ್ನು ನೋಡಿದೆವು. ಅದರಂತೆ ಆಕೆಗೆ ಸ್ವಪ್ನ ಬೀಳದೆ ಹಾಡುಗಳು ಬಂದಿಲ್ಲ. ಒಮ್ಮೆ ಈಕೆ ಒಳ್ಳಾರಿಯಲ್ಲಿದ್ದಾಗ ರಾತ್ರಿ ಕನಸಿನಲ್ಲಿ ಬ್ರಾಹ್ಮಣ ಸನ್ಯಾಸಿಯೊಬ್ಬನನ್ನು ಕಂಡರಂತೆ. ಆತ ಮಣೆಯ ಮೇಲೆ ಕುಳಿತಿದ್ದನಂತೆ. 'ತಾವು ಯಾರು?' ಎಂದು ಭೀಮವ್ವನವರು ವಿಚಾರಿಸಲು "ನಾವು ವಿವಾಹವಾಗಲು ಬಂದಿದ್ದೇವೆ" ಎಂದನಂತೆ. ಸನ್ಯಾಸಿಗೆ ಹೆಣ್ಣು ಕೊಡುವವರು ಯಾರು? ಎಂದು ಭೀಮವ್ವ ಅಂದು ಕೊಳ್ಳುತ್ತಿದ್ದಂತೆಯೇ ಎಚ್ಚರವಾಯಿತು. ಮರುದಿನವೇ ಆಕೆ ಸುಭದ್ರಾ ಕಲ್ಯಾಣ ರಚಿಸಿದರು.

ಈ ವಿಷಯ ಸತ್ಯವಿರಲೂಬಹುದು ಎನ್ನಿಸುತ್ತದೆ. ಏಕೆಂದರೆ ಕಲ್ಪನೆ ಒಂದು ಗತಿಯಲ್ಲಿ ಸಾಗುತ್ತದೆ. ಸಾಕ್ಷಾತ್ತು ಅನಂತ, ಅಗಾಧ, ಹೀಗಾಗಿ ಒಂದೊಂದೂ ದೃಶ್ಯ ಆಕೆ ಕಣ್ಣಾರೆ ಕಂಡುದೇ ಆಗಿದೆ ಎಂಬುದನ್ನು ಆಕೆಯ ಹಾಡುಗಳಲ್ಲಿ ಕಾಣಬಹುದು. ಅಲ್ಲದೆ, ಶಾಲೆಯ ಮುಖವನ್ನೇ ಕಾಣದ ಒಬ್ಬ ಹೆಣ್ಣು ಮಗಳು ಇಂತಹ ರಸಭರಿತವಾದ, ಶಾಸ್ತ್ರೋಕ್ತವಾದ. ಪ್ರಮೇಯಕ್ಕೆ ಎಲ್ಲೂ ಧಕ್ಕೆಬಾರದ, ಹಾಡುಗಳನ್ನು ರಚಿಸಲು ಹೇಗೆ ಸಾಧ್ಯವಾಯಿತು ಎಂಬುದು ನಿಜಕ್ಕೂ ಕುತೂಹಲಕರವಾದ ಹಾಗೂ ಅದ್ಭುತವಾದ ಸಂಗತಿ. ಒಡವೆ ವಸ್ತುಗಳ ವರ್ಣನೆಯಾಗಲೀ. ಭೋಜನ ಪರಿಕರಗಳ ವರ್ಣನೆಯೂಗಲೀ ಅತ್ಯಂತ ಮೂರ್ಮಿಕ.

ಅವ್ವನವರ ಮನೆದೇವರು ತಿರುಮಲಾಪುರದ ವೆಂಕಟೇಶ. ತಿರುಮಲಾಪುರ ಹರಪನಹಳ್ಳಿಯಿಂದ ಸುಮಾರು ಒಂದು ಮೈಲು ದೂರವಿರುವ ಚಿಕ್ಕಗ್ರಾಮ. ಇಲ್ಲಿ ಸ್ವಾಮಿಯ ದೇವಾಲಯವಿದೆ. ಮೂರ್ತಿ ನಯನ ಮನೋಹರ. ಅವ್ವನವರು ಇಲ್ಲಿ ಕುಳಿತು ಹಾಡುಗಳನ್ನು ರಚಿಸುತ್ತಿದ್ದರಂತೆ. ಆಕೆ ಇಡಿಯ ಊರಿಗೇ ತಾಯಿ. ಜನರ ಕಷ್ಟ ಸುಖಗಳನ್ನು ಆಕೆಯ ಬಳಿ ನಿವೇದಿಸಿಕೊಂಡು ಪರಿಹಾರ ಪಡೆಯುತ್ತಿದ್ದರಂತೆ. ಜನಗಳಲ್ಲಿ ಆಕೆಗೆ ಬಹಳ ಅನುಕಂಪೆ. ಜನರಾದರೋ ಆಕೆಯನ್ನು ಸಾಮಾನ್ಯಳೆಂದು ಭಾವಿಸದೆ ದೇವತಾ ಸ್ತ್ರೀಯೆಂದು ಪೂಜ್ಯ ಭಾವದಿಂದ ನೋಡುತ್ತಿದ್ದರಂತೆ.

ಅವ್ವನವರು ಕಾಶಿ, ಪ್ರಯಾಗ, ಉಡುಪಿ, ತಿರುಪತಿ ಮುಂತಾದ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿದ್ದಾರೆ. ಅಲ್ಲಿಯ ದೇವ ಮೂರ್ತಿಗಳ ಬಗ್ಗೆ ರಚನೆ ಮಾಡಿದ್ದಾರೆ. ಪ್ರಯಾಗದಲ್ಲಿ ಗಂಗೆಯ ಯಮುನೆಯರ ಜೊತೆ ಗುಪ್ತಗಾಮಿನಿಯಾದ ಸರಸ್ವತಿಯೂ ದರ್ಶನವಿತ್ತಿದ್ದಾಳೆ. ಅವ್ವನವರು ಎಂಬತ್ತೊಂದು ವರ್ಷಗಳ ತುಂಬು ಜೀವನ ನಡೆಸಿ ಕ್ರಿ.ಶ. 1903 ನೇ ಇಸವಿಯಲ್ಲಿ ದೈವಾಧೀನವಾದರು.

ಅವ್ವನವರ ಹಾಡುಗಳಲ್ಲಿ ಈಗ ಒಂದು ನೂರಾ ಅರವತ್ತು ಕೃತಿಗಳು ಉಪಲಬ್ಧವಿವೆ. ಕೆಲವು ಬೆಳಕು ಕಂಡರೆ ಮತ್ತೆ ಕೆಲವು ಇನ್ನೂ ಹಸ್ತ ಪ್ರತಿಯಾಗೇ ಉಳಿದಿವೆ. ಅಲ್ಲದೆ ಇನ್ನೂ ಅಗಣಿತ ಕೃತಿಗಳು ಬಾಯಿಂದ ಬಾಯಿಗೆ ಹೋಗಿವೆ. ★

## ಯುವವಾಣಿ

# ಆಳದಿಂದಾತ್ಮಮತಿ

ಹಾಲ ಕಾಯಿಸಿ ಹೆಪ್ಪನಿಕ್ಕಿ
ಕಡೆದೊಡೆ ಮೊದಲು |
ಮೇಲೆ ಕಾಣದ ಬೆಣ್ಣೆ ತೇಲಿ ಬರುವಂತೆ ||
ಬಾಳನೀ ಜಗದ ಮಂತುವು
ಕಡೆಯುಲೇಳುವುದು |
ಆಳದಿಂದಾತ್ಮ ಮತಿ–ಮಂಕುತಿಮ್ಮ ||

ಡಾ || ಡಿ. ವಿ. ಗುಂಡಪ್ಪನವರು 'ಮಂಕುತಿಮ್ಮನ ಕಗ್ಗ'ದಲ್ಲಿ ನಾವು ಜ್ಞಾನನಿಷ್ಠರಾಗಿ ಬಾಳ್ವೆಯನ್ನು ನಡೆಸಿದ್ದೇ ಆದರೆ – ಹಾಲ ಕಾಯಿಸಿ ಹೆಪ್ಪುಹಾಕಿ ಕಡೆದರೆ ಕಾಣದೆ ಇರತಕ್ಕ ಬೆಣ್ಣೆ ತೇಲಿ ಬರುವ ಹಾಗೆ – ಅಗೋಚರವಾದ ಆತ್ಮಾನುಭವವಾಗುವುದು ಎಂದಿದ್ದಾರೆ.

ಆತ್ಮಮತಿ ಅನುಭವ ಪಡೆಯಲು ನಾನು ಯಾರು ? ಎಂಬುದನ್ನು ಅರಿಯ ಬೇಕು. ಇಲ್ಲಿ ರಮಣಮಹರ್ಷಿಗಳ ಅಮೃತವಾಣಿಯನ್ನು ಸ್ಮರಿಸಬಹುದು –

ಹೃದಯ ಕುಹರ ಮಧ್ಯೇ
ಕೇವಲಂ ಬ್ರಹ್ಮಮಾತ್ರಂ |
ಅಹಮ್ ಅಹಮಿತಿ ಸಾಕ್ಷಾತ್
ಆತ್ಮರೂಪೇಣ ಭಾತಿ |
ಹೃದಿ ವಿಶ ಮನಸಾ ಸ್ವ
ಚಿನ್ಮತಾ ಮಜ್ಜತಾವ |
ಪವನ ಚರಣ ರೋಧಾತ್ಮ
ನಿಷ್ಠೋ ಭ ವತ್ವಮ್ ||

'ನಾನು' 'ನಾನು' ಎಂಬ ಅನುಭವವು ಹೃದಯದಲ್ಲಿ ಎಲ್ಲಿ ಆಗುವುದೋ ಅದನ್ನು ನಿಷ್ಠೆಯಿಂದ ಹುಡುಕಬೇಕು. ನಾನು ಎಂಬುದರ ಮೂಲವನ್ನು ಹುಡುಕುವುದರಿಂದ ಲೋಕ ವ್ಯವಹಾರ ಕಡಿಮೆಯಾಗಿ – ಮೌನವಾಗುವುದರ ಕಡೆಗೆ ಲಕ್ಷ್ಯಹೋಗುತ್ತದೆ. ಇದರಿಂದ ಮನಸ್ಸು ಶಾಂತತೆಯನ್ನು ಹೊಂದುವುದು. ಶಾಂತಿ ಹೊಂದಿದ ಮನಸ್ಸು ಆತ್ಮಮತಿಯ ಸಾಕ್ಷಾತ್ಕಾರಕ್ಕೆ ಸಿದ್ಧವಾಗುವುದು.

'ಆತ್ಮಾನುಭವ' ಸುಲಭವಲ್ಲ. ಕಷ್ಟಸಾಧ್ಯ, ಸಾಧನೆ ಮಾಡಬೇಕು. ಇಲ್ಲಿ ಒಂದು ದೃಷ್ಟಾಂತವನ್ನು ಕೊಡಬಹುದು.

ವಿದ್ವಾಂಸನೊಬ್ಬ, ಕಾಡಿನಲ್ಲಿ ನಿರಂತರ 'ಅಹಂ ಬ್ರಹ್ಮಾಸ್ಮಿ' ಎನ್ನುತ್ತಿದ್ದ. ಈತನಿಗೆ 'ಆತ್ಮಮತಿ' ಯನ್ನು ನೀಡಬೇಕೆಂದು ಮುನಿಪುಂಗವರೊಬ್ಬರು ಗಾಡಿಯುವನ ವೇಷದಲ್ಲಿ ಗಾಡಿಯಲ್ಲಿ ಕುಳಿತು ಗಾಡಿ ಹೊಡೆಯುತ್ತಾ "ನಾನು ಗಾಡಿಯುವ, ನಾನು ಗಾಡಿಯುವ" ಎಂದು ಹೇಳುತ್ತಾ ಆ ವಿದ್ವಾಂಸನ ಮುಂದೆ ಬಂದರು. ಆ ವಿದ್ವಾಂಸ ನಗುತ್ತಾ "ಅಯ್ಯೋ ಹುಚ್ಚ, ಗಾಡಿಯನ್ನು ಹೊಡೆಯುತ್ತಾ ಇದ್ದೀಯೆ, ಮತ್ತೆ ಗಾಡಿಯುವ ಎಂದು ಬೇರೆ ಕೂಗಿ ಕೊಳ್ಳುತ್ತಿದ್ದಿ?" ಎಂಬುದಾಗಿ ಹಾಸ್ಯ ಮಾಡಿದರು. ಆಗ ಮುನಿಗಳು "ನೀನು ನಿಜವಾಗಿಯೂ ಬ್ರಹ್ಮನೇ ಆಗಿದ್ದೀಯೆ ಮತ್ತೆ 'ನಾನು ಬ್ರಹ್ಮ, ನಾನು ಬ್ರಹ್ಮ' ಎಂದು ಏಕೆ ಕೂಗಿ ಜಪ ಮಾಡುತ್ತಿರುವೆ?" ಎಂದು ಕಣ್ಮರೆಯಾದರು. ಆಗ ವಿದ್ವಾಂಸನಿಗೆ ತನ್ನ ತಪ್ಪಿನ ಅರಿವಾಯಿತು.

ಬ್ರಹ್ಮಾಂಡದ ಶಕ್ತಿಯು ಅಪಾರವಾದದು. ಒಂದೇ ಶಕ್ತಿಯಿಂದ, ಬೆಳಕನ್ನು ಕೊಡುವ ದೀಪಗಳು ಹಾಡುವ ರೇಡಿಯೋಗಳು, ದೂರದರ್ಶಕಗಳು, ಚಲಿಸುವ ಯಂತ್ರಗಳು, ಇತ್ಯಾದಿ ಉಂಟಾಗುವಂತೆ. ಒಂದೇ ಚೈತನ್ಯವು ಅನಂತ – ಶಕ್ತಿಗಳಾಗಿ ತೋರುವುದು. ಎಲ್ಲರಲ್ಲೂ ನೋಡುವ, ಕೇಳುವ ಮಾತನಾಡುವ ಮತ್ತು ಮನಸ್ಸಿನ ಶಕ್ತಿಯೂ ಆಗಿದೆ. ಈ ದೃಷ್ಟಿಯನ್ನು ವಚನ ಶಾಸ್ತ್ರವೂ ಬಹಳ ಸುಲಭದಲ್ಲಿ ತಿಳಿಯಪಡಿಸುತ್ತದೆ.

ವಸ್ತುವೆಂದರೆ ಹ್ಯಾಗಾಯಿತಯ್ಯ
ಹೇಳುವೆ ಕೇಳಯ್ಯ ಮಗನೇ |
ಕಾಷ್ಠದಲ್ಲಿ ಅಗ್ನಿ ಹ್ಯಾಗೆ ಹಾಗಿಪ್ಪುದು |
ಕ್ಷೀರ ದೊಳಗೆ ಘೃತ ಹ್ಯಾಗೆ
ಹಾಗಿಪ್ಪುದು |
ಸರ್ವತ್ರ ಎಲ್ಲಾ ಠಾವಿನಲ್ಲಿಯೂ
ವಸ್ತುವಿನ ಕಳೆ ಪರಿಪೂರ್ಣ
ಆಗಿರ್ಪುದೆಂದನಯ್ಯ
ಮಹಾಲಿಂಗ ಗುರು ಶಿವಸಿದ್ಧೇಶ್ವರ
ಪ್ರಭುವೇ

ಆತ್ಮಶಕ್ತಿಯು ಅರಿವುಂಟಾಗಲು ನಾವು ಎರಡು ಸೆಳೆತಗಳಿಂದ ಪಾರಾಗಬೇಕು. ಯಾವುದು ಆ ದ್ವಂದ್ವ? ಗೀತಾವಾಕ್ಯ ಉತ್ತರಿಸುತ್ತದೆ.

ಇಚ್ಛಾದ್ವೇಷ ಸಮುತ್ಥೇನ
ದ್ವಂದ್ವ ಮೋಹೇನ ಭಾರತ
ಸರ್ವಭೂತಾನಿ ಸಂಮೋಹಂ
ಸರ್ಗೇ ಯಾಂತಿ ಪರಂತಪ ||

ಸುಖ–ದುಃಖ, ಲಾಭ – ನಷ್ಟ, ಇಚ್ಛೆ ದ್ವೇಷ, – ಈ ದ್ವಂದ್ವಗಳು ನಮ್ಮನ್ನು ಪರವಶಗೊಳಿಸಿ ಆಳವಾದ ಆತ್ಮಮತಿಯನ್ನು ವಿಸ್ಮರಣಗೊಳಿಸುತ್ತವೆ. ಇವುಗಳಿಂದ ಮುಕ್ತರಾಗಬೇಕು.

ಆತ್ಮದ ಅರಿವಿಗೆ ಅನುಗುಣವಾದ ಯತ್ನವೂ ಬೇಕು. ಯತ್ನಕ್ಕೆ ಪರಿಜ್ಞಾನ ಬೇಕು. ಅನುಭವಕ್ಕೆ ಗುರೂಪದೇಶ ಬೇಕು. ಗುರು ಉಪದೇಶ ಸಿಗಬೇಕಾದರೆ 'ಅರಿವಿನ ಹಂಬಲ' ಅತಿಯಾಗಿರಬೇಕು.

ಆತ್ಮಾನುಭವವೇ ಭಗವತ್ ಅನುಭವ. ಭಗವಂತನು ಇಲ್ಲದ ಸ್ಥಳವೇ ಇಲ್ಲ. ಪುರುಷಸೂಕ್ತದ ಮಂತ್ರದಲ್ಲಿ ಇದೇ ದೃಷ್ಟಿಯನ್ನು ವಿವರಿಸಲಾಗಿದೆ.

ಸಹಸ್ರ ಶೀರ್ಷಾ ಪುರುಷಃ
ಸಹಸ್ರಾಕ್ಷಃ ಸಹಸ್ರಪಾತ್ |
ಸ ಭೂಮಿಂ ವಿಶ್ವತೋ ವೃತ್ವಾ |
ಅತ್ಯತಿಷ್ಠ ದ್ದಶಾಂಗುಲಮ್ ||

ಭಗವಂತನು ಭೂಮಿ, ಆಕಾಶ, ಮೀರಿ

**ಮತ್ತೀಗೆರೆ ಅನಂತು**



ಅಲಿಪಿರಿಯ ಬಳಿ ನಿರ್ಮಿಸಲಾಗಿರುವ ವಿಕಲಾಂಗ ಶಿಕ್ಷಣ – ತರಬೇತಿ – ಉತ್ಪಾದತಾ ಕೇಂದ್ರ ಭವನ

# ವಿಕಲಾಂಗ ಶಿಕ್ಷಣ - ತರಬೇತಿ ಉತ್ಪಾದನಾಕೇಂದ್ರ

ಮೂಗ – ಕಿವುಡ ವಿದ್ಯಾರ್ಥಿಗಳು ನಿರ್ಮಿಸಿದ ಹಲವಾರು ಕರಕುಶಲ ವಸ್ತುಗಳು. ನೋಡುತ್ತಿರುವವರು ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮಾರಾವ್, ಶ್ರೀ ಡಿ. ಸುಬ್ಬರಾಯಲು, ಶ್ರೀಮತಿ ಎಸ್. ರಾಜ ಕುಮಾರಿ ಹಾಗೂ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ.



ತಿರುಮಲೆ–ತಿರುಪತಿ ದೇವಸ್ಥಾನಗಳು ಹಿಂದೂ ಧರ್ಮ–ಸಂಸ್ಕೃತಿ ಪರಿರಕ್ಷಣೆಗೆ, ವಿದ್ಯಾ ಪ್ರಸಾರಕ್ಕೆ, ಮಾನವ ಸೇವಾ ಧರ್ಮಕ್ಕೆ ಕಂಕಣ ಬದ್ಧವಾಗಿವೆ. ಮಾನವ ಸೇವೆಯೇ ಮಾಧವ ಸೇವೆ ಎಂಬ ಭಾವನೆಯಿಂದ ಮೂಗ ಕಿವುಡು, ಕುರುಡರಿಗಾಗಿ ಶಾಲೆಗಳನ್ನು ನಡೆಸುತ್ತ ಬಂದಿದೆ. ಅನಾಥ ಬಾಲಕ ಬಾಲಕಿಯರಿಗಾಗಿ ಬಾಲಮಂದಿರವನ್ನೂ ರೋಗಿಗಳಿಗಾಗಿ ಆಸ್ಪತ್ರೆಗಳನ್ನೂ, ಕುಷ್ಠರೋಗಿಗಳಿಗೆ ಭಿಕ್ಷುಕರಿಗೆ ಶರಣಾಲಯಗಳನ್ನೂ ನಡೆಸುತ್ತಿದೆ. ಇದರಂತೆಯೇ ತಿ ತಿ. ದೇ. ಕೇಂದ್ರ ಆಸ್ಪತ್ರೆಯ ಅಂಗವಾಗಿ ಕೆಲಸ ಮಾಡುತ್ತಿರುವ ಕೃತ್ರಿಮ ಅವಯವ ಕೇಂದ್ರ ವಿಕಲಾಂಗರಿಗೆ ಕೃತಿಮ ಅವಯವಗಳನ್ನು ನೀಡಿ ವೃತ್ತಿ, ವೈದ್ಯರೀತ್ಯ ಸಾಂಘಿಕ ಸೇವೆ ಮಾಡಲು 1981 ರಿಂದ ಕೆಲಸ ಮಾಡುತ್ತಿದೆ. ಇದುವರೆಗೆ ಆಂಧ್ರ, ತಮಿಳುನಾಡು ಕರ್ನಾಟಕಗಳಿಗೆ ಸೇರಿದ ಇನ್ನೂರಐವತ್ತು ಮಂದಿ ಈ ಕೇಂದ್ರದ ನೆರವನ್ನು ಪಡೆದಿದ್ದಾರೆ

ಅಂಗ ವೈಕಲ್ಯ ಎನ್ನುವುದು ಒಂದು ಗಂಭೀರವಾದ ಸಾಮಾಜಿಕ, ಆರ್ಥಿಕ, ಮಾನಸಿಕ ಸಮಸ್ಯೆ, ಅದನ್ನು ಎದುರಿಸಿ, ವಿಕಲಾಂಗರ ಸಮಸ್ಯೆಗಳನ್ನು ಪರಿಷ್ಕರಿಸಲು ಶಕ್ತಿ ವಂಚನೆಯಿಲ್ಲದಂತೆ ಸರ್ಕಾರ ಪ್ರಯತ್ನಿಸುತ್ತದೆ ಎಂದು ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ ರಾಮರಾಯರು ಆಸಕ್ತಿಯಿಂದ ಕೃಷಿಮಾಡಿ ವಿಶಾಖಪಟ್ಟಣ, ಹಾಗೂ ತಿರುಪತಿಗಳಲ್ಲಿ ವಿಕಲಾಂಗರಿಗಾಗಿ ಶಿಕ್ಷಣ– ತರಬೇತಿ– ಉತ್ಪಾದನಾ ಕೇಂದ್ರವನ್ನು ಆರಂಭಿಸಬೇಕೆಂದು ಪ್ರಯತ್ನಿಸಿದರು. ಅದರ ಫಲವೇ ತಿ. ತಿ. ದೇ. ಆರಂಭಿಸಿರುವ ಈ ಕೇಂದ್ರ.

> "ಅತ್ಯಧಿಕ ಸಂಖ್ಯೆಯಲ್ಲಿರುವ ವಿಕಲಾಂಗರ ಸರಿರಯಾದ ಸಮಸ್ಯೆಗಳನ್ನು ಸಂಕ್ಷೇಮ ರಾಜ್ಯ ಮರೆಯಲು ಸಾಧ್ಯವಿಲ್ಲ. ವಿಕಲಾಂಗರು ಎದುರಿಸುತ್ತಿರುವ ಅನೇಕ ಜಟಿಲ ಸಮಸ್ಯೆಗಳನ್ನು ಸಹಾನುಭೂತಿಯಿಂದ ಅರ್ಥಮಾಡಿಕೊಳ್ಳಲು ನಾವು ಚಿತ್ತಶುದ್ಧಿಯಿಂದ ಪ್ರಯತ್ನಿಸುತ್ತಿದ್ದೇವೆ. ಆದಷ್ಟು ಬೇಗ ಸಾಧ್ಯವಾದಷ್ಟು ಸಮಸ್ಯೆಗಳನ್ನು ಪರಿಹರಿಸಲು ನಾವು ಪ್ರಯತ್ನಿಸುತ್ತಿದ್ದೇವೆ. ವಿಕಲಾಂಗರ ಸಮಸ್ಯಾ ಪರಿಷ್ಕಾರದಲ್ಲಿ ಪ್ರಭುತ್ವ ಶಕ್ತಿವಂಚನೆಯಿಲ್ಲದೆ ಕೆಲಸಮಾಡುತ್ತದೆ"
>
> – ಶ್ರೀ ಎನ್.ಟಿ. ರಾಮಾರಾವ್
> ಮುಖ್ಯ ಮಂತ್ರಿ
> ಪ್ರಪಂಚ ಅಂಗವಿಕಲರ ದಿನ, 20–3–83

ಮಾನವ ಸೇವಾ ಕಾರ್ಯದಲ್ಲಿ, ತಿರುಪತಿಯ ಅಲಿಪಿರಿಯ ಬಳಿ ವಿಕಲಾಂಗ ಶಿಕ್ಷಣ ಹಾಗೂ ತರಬೇತಿ ಉತ್ಪಾದನಾ ಕೇಂದ್ರವನ್ನು ರುಧಿರೋದ್ಗಾರಿ ಸಂವತ್ಸರದ ಉಗಾದಿಯಂದು ತಿ. ತಿ. ದೇ. ಆರಂಭಿಸಿತು.

ಅಂಗವಿಕಲರ ಅಭ್ಯುನ್ನತಿಯ ಶಿಕ್ಷಣ, ತರಬೇತಿ ಕೇಂದ್ರವಾದ ಈ ಸಂಸ್ಥೆಯನ್ನು ಆಂಧ್ರಪ್ರದೇಶದ ಮುಖ್ಯ ಮಂತ್ರಿ ಶ್ರೀ ಎನ್. ಟಿ. ರಾಮಾರಾವ್ ಅವರು ಅಂದು ಬೆಳಗ್ಗೆ ಉದ್ಘಾಟಿಸಿದರು. ಮುಖ್ಯಮಂತ್ರಿಗಳ ಆಸಕ್ತಿ ಯಿಂದ ಆಂಧ್ರಪ್ರದೇಶದ ಮುಖ್ಯ ಕಾರ್ಯದರ್ಶಿ ಶ್ರೀ ಬಿ. ಎನ್. ರಾಮನ್ ತಿ. ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿರೆಡ್ಡಿ ಹಾಗೂ ಆಂ. ಪ್ರ. ಅಂಗವಿಕಲರ ಕ್ಷೇಮಾಭಿವೃದ್ಧಿ ಸಂಸ್ಥೆಯ ನಿರ್ದೇಶಕ ಡಾ॥ ಎ. ಪಿ. ರಂಗಾರಾವ್ ಅವರುಗಳ ಸಂಯೋಜಿತ ಸಮಾಲೋಚನೆಗಳಿಂದಾಗಿ ಉಂಟಾಗಿರುವ ಈ ಕೇಂದ್ರದ ಆರಂಭದ ವೆಚ್ಚ 12 ಲಕ್ಷ ರೂಗಳೆಂದೂ ವಾರ್ಷಿಕ ವೆಚ್ಚ 6 ಲಕ್ಷ ರೂಗಳೆಂದೂ ಅಂದಾಜು ಮಾಡಲಾಗಿದೆ.

ಅಲಿಪಿರಿಯ ಬಳಿಯ ತಿ. ತಿ. ದೇ. ಕಟ್ಟಡದಲ್ಲಿ ನಿರ್ವಹಿಸಲಾಗುವ ಈ ಸಂಸ್ಥೆ ನೂರು ಅಂಗವಿಕಲ ವಿದ್ಯಾರ್ಥಿಗಳಿಗೆ ನಿವಾಸಶಾಲೆಯಂತೆ ಕೆಲಸ ಮಾಡುತ್ತದೆ. ಅಂಗವಿಕಲರ ಶಕ್ತಿ ಸಾಮರ್ಥ್ಯಗಳನ್ನು ಗುರುತಿಸಿ ಅವರಿಗೆ ಅಗತ್ಯವಾದ ಸಲಕರಣೆ ತರಬೇತಿಗಳನ್ನು ನೀಡಲಾಗುವುದು. ಇಲ್ಲಿನ ಉತ್ಪಾದನೆಯನ್ನು ಮೂರು ವಿಭಾಗಗಳಲ್ಲಿ ಅನುವುಗೊಳಿಸಲಾಗುವುದು, ಅವುಗಳೆಂದರೆ: ಸಮೂಹ ಉತ್ಪಾದನಾ ತರಬೇತಿ, ನಗರೋಪಯೋಗಿ ವೈಯಕ್ತಿಕ ಕೆಲಸಗಳು, ವೈಯುಕ್ತಿಕವಾಗಿ ಮಾಡುವ ಗೃಹೋಪಕರಣಗಳು. ಇಲ್ಲಿನ ಉತ್ಪಾದನೆಗಳೆಂದರೆ ಚಾಪೆ ಹೆಣೆಯುವುದು, ರಬ್ಬರ್ ಸ್ಟಾಂಪ್ ಉತ್ಪಾದನೆ, ಬೆರಳಚ್ಚು, ವಿದ್ಯುತ್ ಉಪಕರಣಗಳ ಸಂಯೋಜನೆ, ಗೃಹ ಅಲಂಕಾರ ಸಾಮಗ್ರಿಗಳು ಮೊದಲಾದವು. ಶಿಕ್ಷಣ ಪಡೆದ ನಂತರ ಈ ವಿದ್ಯಾರ್ಥಿಗಳು ಸ್ವ – ಉದ್ಯೋಗದಲ್ಲಿ ಸ್ಥಿರಗೊಳ್ಳಲೂ, ಇತರತ್ರ ಉದ್ಯೋಗ ಸಂಪಾದಿಸಿಕೊಳ್ಳಲೂ ನೆರವು ನೀಡಲಾಗುವುದು.

ವಿವಿಧ ತರಬೇತಿಗಳಿಗೆ ತಕ್ಕಂತಹ ಅವಧಿಗಳನ್ನು ಹೊಂದಿದಂತೆ ಇರುವ ಹಲವಾರು ಕೋರ್ಸ್‌ಗಳಿಗೆ ವರ್ಷವೊಂದಕ್ಕೆ ನೂರು ಮಂದಿ ಅಂಗವಿಕಲರಿಗೆ ಪ್ರವೇಶಾವಕಾಶವಿರುವ ಈ ಕೇಂದ್ರದಲ್ಲಿ ಸಾಮಾನ್ಯ ಶಿಕ್ಷಣ, ಹಾಗೂ ಸ್ವಾವಲಂಬನೆಗಳಲ್ಲಿಯೂ ಶಿಕ್ಷಣ ನೀಡಲಾಗುವುದು. ★



ವಿಕಲಾಂಗ ಶಿಕ್ಷಣ – ತರಬೇತಿ – ಉತ್ಪಾದನಾ ಕೇಂದ್ರದ ಲಾಂಛನದೊಡನೆ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮಾರಾವ್.

# ಮುಖ್ಯ ಮಂತ್ರಿಯವರಿಂದ ಉದ್ಘಾಟನೆ

ಕೇಂದ್ರದ ವಿದ್ಯಾರ್ಥಿಗಳು ಉತ್ಪಾದನೆಯಲ್ಲಿ ತೊಡಗಿರುವುದನ್ನು ವೀಕ್ಷಿಸುತ್ತಿರುವ ಮುಖ್ಯ ಮಂತ್ರಿ (ಹೊಲಿಗೆ ವಿಭಾಗ)



# ಭಕ್ತಿ ಭಂಡಾರಿ ಬಸವಣ್ಣ

ಹಿಂದೂ ಧರ್ಮದಲ್ಲಿ ಅನೇಕ ಪಂಥಗಳಿದ್ದು, ವೀರಶೈವ ಪಂಥವೂ ಒಂದು. ಕರ್ನಾಟಕವನ್ನು ಆಳಿದ ಬಿಜ್ಜಳರಾಜನ ಭಂಡಾರಿಯಾಗಿದ್ದ ಬಸವೇಶ್ವರರ ಕಾಲದಲ್ಲಿ ಉಚ್ಛ್ರಾಯ ಸ್ಥಿತಿಗೇರಿತು. ಕಲ್ಯಾಣದಲ್ಲಿ ಬಸವೇಶ್ವರರು ಸ್ಥಾಪಿಸಿದ ಅನುಭವ ಮಂಟಪದ ಶೂನ್ಯ ಸಿಂಹಾಸನಕ್ಕೆ ಅಲ್ಲಮ ಪ್ರಭುಗಳು ಅಧ್ಯಕ್ಷರಾಗಿದ್ದರು. ಮಹಾದೇವಿಅಕ್ಕ, ಚೆನ್ನ ಬಸವಣ್ಣ, ಮಡಿವಾಳ ಮಾಚಯ್ಯ, ಸಿದ್ಧರಾಮ, ಅಂಬಿಗರ ಚೌಡಯ್ಯ—ಡೋಹರ ಕಕ್ಕಯ್ಯ, ಮುಂತಾದ ಅನೇಕ ಶರಣರು ಸಮಕಾಲೀನರಾಗಿದ್ದರು. ಇವರ ಅನುಭವದಿಂದ ಹೊರ ಹೊಮ್ಮಿದ ನುಡಿ ರತ್ನಗಳೇ ಮುಂದೆ ವಚನ ಸಾಹಿತ್ಯವಾಗಿ ಒಂದು ಪ್ರತ್ಯೇಕ ಸಾಹಿತ್ಯ ಪ್ರಾಕಾರವೆಂದೆನಿಸಿಕೊಂಡಿತು. ವಚನಗಳು ಆಧ್ಯಾತ್ಮ ಆಕಾಶದಲ್ಲಿ ಶಾಶ್ವತವಾದ ಒಂದು ಮಾರ್ಗವನ್ನು ಏರ್ಪಡಿಸಿಕೊಟ್ಟದ್ದೇ ಅಲ್ಲದೆ ಕನ್ನಡ ಸಾಹಿತ್ಯವೂ ಸಿರಿಗೊಳ್ಳುವಂತೆ ಮಾಡಿವೆ. ಶರಣರ ಆತ್ಮಜ್ಯೋತಿಗಳು ತೋರಿದ ಸತ್ಯದ ನಾನಾ ಮುಖಗಳ ನಿತ್ಯ ಸತ್ಯವಾದ ಅನುಭವಗಳು ವಚನ ರೂಪದಲ್ಲಿ ಹೊರಹೊಮ್ಮಿ, ಅವು ಸಮಾಜದ ಲೋಪ ದೋಷಗಳನ್ನು ತಿದ್ದುವುದೇ ಅಲ್ಲದೆ, ಸರಿಯಾದ ಮಾರ್ಗಗಳನ್ನು ತೋರಿ, ಸಾಮಾಜಿಕ ಕ್ರಾಂತಿಯನ್ನೇ ಉಂಟು ಮಾಡಿದವು. ಈ ವಚನಗಳಿಗೆ, ವಚನ ಸಾಹಿತ್ಯಕ್ಕೆ ಬಸವೇಶ್ವರರ ವಚನಗಳು ಅಮೂಲ್ಯ ಕೊಡುಗೆಗಳಾಗಿವೆ.

ಆಧ್ಯಾತ್ಮಿಕದ ನಾನಾ ಹಂತಗಳಲ್ಲಿ ಬಸವಣ್ಣ ಅನುಭವಿಸಿದ ಅನುಭವಗಳು ಭವಿಷ್ಯದ ಪೀಳಿಗೆಗೆ ವರವಾದದ್ದೇ ಅಲ್ಲದೆ, ಅಂದಿನ ಸಾಮಾಜಿಕ ಕ್ರಾಂತಿಗೆ ಆ ಬೆಳಕಿನಲ್ಲಿ ಮುಂದಿನ ಪೀಳಿಗೆ ಜ್ಞಾನದತ್ತ ಪೂರ್ಣತೆಯತ್ತ ನಡೆಯಲು ಮೂಲ ಕಾರಣವಾಯಿತು. ಆದಕ್ಕಾಗಿಯೇ ಇವರು ಎಲ್ಲ ಶರಣರಿಗೂ ಅಣ್ಣನಾಗಿ ಮುಂದಿನ ಜನಾಂಗಕ್ಕೆ ಅಣ್ಣ ಬಸವೇಶ್ವರ ಅಥವ ಬಸವಣ್ಣನಾದರು. ಅಂದಿನ ಸಮಾಜದ ಜನಜೀವನದ ಎಲ್ಲ ಮಜಲುಗಳನ್ನು ಪೂರ್ಣವಾಗಿ ಅರ್ಥ ಮಾಡಿಕೊಂಡು, ಅವೆಲ್ಲಕ್ಕೂ ಮನಮಿಡಿದು, ಸಾಧ್ಯವಾದಷ್ಟು ತಿದ್ದಿ, ಪರಿಹಾರ ಸೂಚಿಸಿ ಸಾರ್ಥಕ ಜೀವನವನ್ನು ಮಾಡಿ ಕಲ್ಯಾಣವನ್ನು 'ಕ್ರಾಂತಿ ಕಲ್ಯಾಣ'ವನ್ನಾಗಿಸಿ ಆಚಂದ್ರಾರ್ಕವಾಗಿ ಕ್ರಾಂತಿಗೆ ಮೂಲ ಸ್ಫೂರ್ತಿಯಾಗಿ ಉಳಿದು ಕೊಂಡರು ಬಸವಣ್ಣ. ಅವರ ವಚನ ಸಾಗರದ ಕೆಲ ವಚನಗಳನ್ನು ಮಾತ್ರ ಇಲ್ಲಿ ಪರಿಚಯಿಸಲಾಗಿದೆ. ಇವು ಎಲ್ಲರಿಗೂ ಸುಲಭವಾಗಿ ಅರ್ಥವಾಗುವಂತಿರುವುದರಿಂದ, ಅರ್ಥವಿವರಣೆ ಹೆಚ್ಚಿಗೆ ಮಾಡಿಲ್ಲ.

ಜೀವನ ನಶ್ವರ. ಈ ಅಲ್ಪ ಜೀವಾವಧಿಯನ್ನು ಅರ್ಥ ಮಾಡಿಕೊಳ್ಳದೆ ಅಜ್ಞಾನದ ಅಂಧಕಾರದಲ್ಲೇ ಕ್ಷಣಿಕ ಸುಖಗಳಿಗೆ ಆಸೆ ಪಡುತ್ತ, ಅದೇ ಶಾಶ್ವತವೆಂದು ಭ್ರಮಿಸಿ, ಭ್ರಮಾಧೀನನಾಗಿ ಅದಕ್ಕಾಗಿ ಹುಸಿಯ ನುಡಿದು, ಸುತ್ತಲವರನ್ನು ವಂಚಿಸಿದೆನೆಂದು ಭಾವಿಸಿ ತನ್ನನ್ನೇ ತಾನು ವಂಚಿಸಿಕೊಳ್ಳುವ ಜನರ ಅಜ್ಞಾನವನ್ನು ಕಂಡ ಅಣ್ಣ –

ಹಾವಿನ ಬಾಯ ಕಪ್ಪೆ ಹಸಿದು
ಹಾರುವ ನೊಣಕ್ಕೆ ಆಸೆಮಾಡುವಂತೆ
ಶೂಲವನೇರುವ ಕಳ್ಳನು ಹಾಲು ತುಪ್ಪವ
ಕುಡಿದು ಮೇಲೀಸುಕಾಲ ಬದುಕುವನೋ
ಕೆಡುವೊಡಲ ನೆಚ್ಚಿ, ಕಡುಹುಸಿಯನೆ ಹುಸಿದು
ಒಡಲ ಹೊರುವರ
ಕೂಡಲ ಸಂಗಮದೇವನೊಲ್ಲ
ಕಾಣಿರಣ್ಣಾ

ಸರ್ವಾಂತರ್ಯಾಮಿ ಪರಮೇಶನು ಎಲ್ಲಾ ಕಡೆಯೂ ಇರುವಿಕೆಯನ್ನು, ಪಾಮರರಿಗೂ ಅರ್ಥವಾಗುವಂತೆ ವಿವರಿಸುತ್ತದೆ ಈ ವಚನ.

ಮರೀಚಿಯೊಳಡಗಿದ ಬಿಸಿಲಿನಂತಿದ್ದಿತ್ತು
ಕ್ಷೀರದೊಳಗಣ ತುಪ್ಪದಂತಿದ್ದಿತ್ತು
ಚಿತ್ರಕನೊಳಡಗಿದ ಚಿತ್ರ ಪಟದಂತಿದ್ದಿತ್ತು
ಆಲಿಯೊಳಗಣ ತೇಜದ ಗೋಪ್ಯದಂತಿದ್ದಿತ್ತು
ನುಡಿಯೊಳಡಗಿದ ಅರ್ಥದಂತೆ ಇದ್ದಿತ್ತು
ಕೂಡಲ ಸಂಗಯ್ಯಾ ನಿಮ್ಮ ನಿಲುವು.

ಮಾನವನೇ ಮಹನೀಯನು. ಆ ಮಹನೀಯತ್ವ ಅಥವಾ ತನ್ನ ಮೂಲ ಪರಮಾತ್ಮತೆಯನ್ನು ಪಡೆಯುವುದು ಮಾನವನ ಕೈಯ್ಯಲ್ಲೇ ಇದೆ. ತನ್ನನ್ನು ತಾನು ಅರಿಯ ಬೇಕು, ಅಂದರೆ ತಾನಾರು ? ತನ್ನ ಜನ್ಮದ ಸಾರ್ಥಕತೆ ಹೇಗೆ, ಅದನ್ನು ಸಾರ್ಥಕ ಪಡಿಸಿಕೊಳ್ಳುವ ಬಗೆ ಹೇಗೆ ? ಅಜ್ಞಾನದ ಕಾರ್ಗತ್ತಲಿನಿಂದ ಸಿಡಿದು ಭವಚಕ್ರದ ಮೋಹಾಕರ್ಷಣೆಯಿಂದ ಹೊರಬಂದರೆ ತಾನೇನಾಗುತ್ತಾನೆ – ಎಂಬುದನ್ನು ವಿವರಿಸುವುದು ಈ ವಚನ.

ಅಯ್ಯಾ,
ತನ್ನ ತಾನರಿದು ತನ್ನಅಜ್ಞಾನ
ಆಶಾಪಾಶ ಅನಾಚಾರ ಅಸತ್ಯ
ನಡೆನುಡಿಗಳ ತಾನರಿದು
ತನ್ನ ದುರ್ಗುಣಗಳ ನೀಗಿ
ನಿಜದಲ್ಲಿ ನಿಂದೊಡೆ,
ತಾನೇ ಮಾಯಾತೀತ, ತಾನೇ ಗುಣಾತೀತ,
ತಾನೇ ಸುಗುಣ ನಿರ್ಗುಣಕ್ಕಾಧಾರ ಮೂರ್ತಿ
ತಾನೇ ಸಾಕಾರ ನಿರಾಕಾರಕ್ಕೆ
ಚೈತನ್ಯಮೂರ್ತಿ
ನಿಜವಸ್ತು ನೋಡಾ
ಅಪ್ರಮಾಣ ಕೂಡಲ ಸಂಗಮದೇವಾ

ಇಂತಹ ಮಹನೀಯತೆ ಅಥವ ಮೋಕ್ಷ ಪಡೆಯಲು ತೀವ್ರ ಹಂಬಲವೂ ಬೇಕು. ಅದಕ್ಕಾಗಿ ಚಡಪಡಿಸಿ, ಏಕಾಗ್ರತೆ ವೈರಾಗ್ಯಗಳಿಂದ ಪರಮಾತ್ಮನನ್ನು ಧ್ಯಾನಿಸಿ, ಅವನಲ್ಲಿ ಐಕ್ಯನಾಗುವಲ್ಲಿರುವ ಅಡಚಣೆಗಳನ್ನು ಅರ್ಥ ಮಾಡಿಕೊಂಡು ಸಮಯಬಂದಾಗ ಅವುಗಳನ್ನು ಧಿಕ್ಕರಿಸಿ ಮೋಕ್ಷದ ಹಂಬಲವನ್ನೇ ಮುಖ್ಯವನ್ನಾಗಿಸಿ ಕೊಳ್ಳಬೇಕು. ಇದರ ಬಗ್ಗೆ ಅಣ್ಣನ ಮನಸ್ಸು ಇದ್ದ ರೀತಿ–

ಚಂದ್ರಮನಂತೆ ಕಳೆ ಸಮನಿಸಿತೆನಗೆ
ಸಂಸಾರವೆಂಬ ರಾಹು
ಸರ್ವಗ್ರಾಸಿಯಾಗಿ ನುಂಗಿತಯ್ಯಾ
ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು
ಇನ್ನೆಂದಿಗೆ ಮೋಕ್ಷವಹುದೋ
ಕೂಡಲ ಸಂಗಮದೇವಾ

ನಶ್ವರ ಜಗತ್ತಿನಲ್ಲಿ ಯಾರಿಗೆ ಯಾರು? ಎಲ್ಲಿಯವರೆಗೆ ಬಾಂಧವ್ಯಗಳು, ಮೋಹ ಭ್ರಾಂತಿಗಳೂ ಜೊತೆಯಾಗಿ ಬರುತ್ತವೆ? ಮಾನವ ಸಮಾಜದಲ್ಲಿ, ತಾನು ನಗುವಾಗ ಎಲ್ಲ ನಗುತ್ತಾರೆ. ಅಳುವಾಗ ಆ ಅಳುವಿಗೆ ಕಾರಣ ಕೇಳಿ ಅದನ್ನು ಪರಿಹರಿಸುವುದಿರಲಿ, ಹತ್ತಿರ ಕೂಡ ಸೇರರು. ಆಗ ಗೆಳೆಯರೂ ಇಲ್ಲ, ಹೆತ್ತವರಾಗಲಿ, ರಕ್ತಹಂಚಿಕೊಂಡು ಬಂದೆವೆನ್ನುವ ಸೋದರರಾಗಲಿ, ಯಾರೂ ಇರುವುದಿಲ್ಲ. ಮನುಷ್ಯನಿಗೇ ಅಲ್ಲ ಪ್ರಕೃತಿ ಕೂಡ ಈ ಕಟು ಸತ್ಯದಿಂದ ಹೊರತಲ್ಲ. ಅಂತಹ ಸಮಯದಲ್ಲಿ ಜಗದೊಡೆಯನಾದ ಪರಮೇಶ್ವರನನ್ನು ಬಿಟ್ಟು ಯಾರಿಗೆ ಯಾರೂ ಆಗುವುದಿಲ್ಲ.

ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ
ಚಂದ್ರ ಕುಂದೆ ಕುಂದುವುದಯ್ಯಾ

**ಶ್ರೀ ಮ. ಕೃಷ್ಣಪ್ಪ** ಬಿ. ಎ;

ಚಂದ್ರಂಗೆ ರಾಹು ಅಡ್ಡ ಬಂದಲ್ಲಿಯಂಬುಧಿ
ಬೊಬ್ಬಿಟ್ಟಿತ್ತೆ ?
ಅಂಬುಧಿಯ ಮುನಿಯಾಪೋಷನವ ಕೊಂಬಲ್ಲಿ
ಚಂದ್ರಮನಡ್ಡ ಬಂದನೆ ?
ಆರಿಗಾರೂ ಇಲ್ಲ ಕೆಟ್ಟವಗೆ ಕೆಳೆಯಿಲ್ಲ
ಜಗದ ನೆಂಟ ನೀನೇ ಅಯ್ಯ
ಕೂಡಲ ಸಂಗಮದೇವಾ

ಜಗದೊಡೆಯನ ಕರುಣೆ ಪಡೆಯಲು ದೃಢವಾದ ಭಕ್ತಿ ಬೇಕು. ಶರಣರೊಂದಿಗಿನ ಒಡನಾಟ ವಾಗಲಿ, ಭಕ್ತನೆಂಬ ಸೋಗಾಗಲಿ, ಒಣ ಪೂಜೆ ಯಾಗಲಿ ಪರಮೇಶ್ವರನನ್ನು ಒಲಿಸಲಾರವು ಎಂಬುದಕ್ಕೆ –

ಎನಿಸುಕಾಲ ಕಲ್ಲು ನೀರೊಳಗಿರ್ದರೇನು
ನೆನೆದು ಮೃದುವಾಗ ಬಲ್ಲುದೆ?
ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯ
ಮನದಲ್ಲಿ ದೃಢವಿಲ್ಲದನ್ನಕ್ಕ?
ನಿಧಾನವ ಕಾಯ್ದಿರ್ದ ಬೆಂತರನಂತೆ
ಆದರ ವಿಧಿ ಎನಗಾಯಿತ್ತು
ಕೂಡಲ ಸಂಗಮದೇವಾ

ಪೂಜೆಯು ಲಿಂಗಕ್ಕೇ ಅಲ್ಲ, ಜಂಗಮಕ್ಕೂ ಅನ್ವಯಿಸುತ್ತದೆ. ಏನನ್ನಾದರೂ ಮಾಡಿದರೆ ಹೇಗೆ ನಿಷ್ಕಾಮವಾಗಿ, ನಿಗರ್ವವಾಗಿ, ಅರ್ಪಣಾ ಮನೋಭಾವದಿಂದ ಮಾಡ ಬೇಕು? ಎಲ್ಲವೂ ಶಿವಮಯ, ಶಿವಾರ್ಪಣವೆಂದು ಮಾಡಬೇಕು.

'ಮಾಟ ಕೂಟ ಫಲಪ್ರಾಪ್ತಿ' ಎಂಬ ಮಾತು
ಕೇಳಲಾಗದು
ಶಿವ, ಶಿವಾ, ಶಿವಭಕ್ತರಿಗೆ
"ಮಾಡಿದೆ" ನೆನ್ನದಿರದೆಂದು
ಶ್ರೀ ಗುರುಲಿಂಗವು, ಕೃಪೆಮಾಡಿದ ಕಾರಣ
ಅಲ್ಲಿಮಾಡುವವರೂ, ಮಾಡಿಸಿ ಕೊಂಬವರೂ
ನೀವೇ
ಕೂಡಲ ಸಂಗಮದೇವಾ

ಅಷ್ಟೇ ಅಲ್ಲ ಢಂಬದಿಂದ ಸೇವೆ ಮಾಡುವವ ರನ್ನು ಕುರಿತು ವಿಡಂಬಿಸಿಯೂ ಇದ್ದಾರೆ.

ಮಾಡಿ ಮಾಡಿ ಕೆಟ್ಟರು ಮನ ವಿಲ್ಲದೆ,
ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ,
ಮಾಡುವ ನೀಡುವ ನಿಜಗುಣವುಳ್ಳವರ
ಕೂಡಿಕೊಂಬ ನಮ್ಮ ಕೂಡಲ ಸಂಗಮದೇವ

ಮನವಿಲ್ಲದೆ ಪೂಜೆ ಮಾಡಿದರೂ, ನಿಜವಿಲ್ಲದೆ ದಾನಮಾಡಿದರೂ ವ್ಯರ್ಥವಾಗದೆ ಮತ್ತೇನು, ಮಾಡುವ ಕ್ರಿಯೆಗಳು ಸ್ವಭಾವ ಜನ್ಯವಾಗಿ ಅಂತ ರಂಗ ಪೂರ್ಣವಾಗಿರಬೇಕು ಎಂಬುದು ಬಸವ ಣ್ಣನವರ ಭಾವ, ಮಾಡಿಸುವವನೂ ಮಾಡು ವವನೂ ಅವನೇ ಎಂದ ಬಳಿಕ.

ಬಸವಣ್ಣ ಭಕ್ತಿ ಭಂಡಾರಿ ಎಂದು ಸಮಕಾ ಲೀನ ರಿಂದಲೇ ಅಲ್ಲದೆ ಮುಂದಿನವರಿಂದಲೂ ಕರೆಸಿ ಕೊಂಡವರು. ಸುತ್ತಣ ಶಿವಶರಣರು ಅಣ್ಣ ನವರನ್ನು ಹೊಗಳುವಾಗ ಅವರು ಹೇಳುವ ಮಾತು ಮನನಯೋಗ್ಯ.

ಎನ್ನವರೊಲಿದು ಹೊನ್ನ ಶೂಲಕಿಕ್ಕಿದರೆನ್ನ
ಹೊಗಳಿ ಹೊಗಳಿ
ಎನ್ನ ಹೊಗಳಿಕೆ ಎನ್ನ ನಿಮ್ಮ ಗೊಂಡಿತ್ತಲ್ಲಾ
ಅಯ್ಯಾ ನಿಮ್ಮ ಮನ್ನಣೆಯೆ ಮಸೆದಲಗಾಗಿ
ತಾಗಿತ್ತಲ್ಲ
ಅಯ್ಯೊ ನೊಂದೆನು ಸೈರಿಸಲಾರೆನು
ಕೂಡಲ ಸಂಗಮದೇವಾ ನೀನೆಗೊಳ್ಳಿದನಾದರೆ
ಎನ್ನ ಹೊಗಳತೆಗಡ್ಡ ಬಾರಾ ಧರ್ಮಿ

ಇತರರ ಹೊಗಳಿಕೆಯನ್ನು–ಪ್ರಶಂಸೆಯನ್ನು ಬಯಸದೆ ತಣ್ಣಗೆ ತನ್ನ ಕೈಲಾಸವಾದ ಕಾಯಕ ವನ್ನು ನಡೆಸಿ ಕೊಂಡು ಹೋಗುವುದಷ್ಟೆ ಶರಣ ಧರ್ಮವಲ್ಲ; ಅದು ಇನ್ನೂ ಮಿಗಿಲಾದದ್ದು ಎನ್ನಲು ಈ ವಚನ ಒಂದು ಕನ್ನಡಿಯಾಗುತ್ತದೆ.

ಆತ್ಮಸ್ತುತಿ ಪರನಿಂದೆಯ ಕೇಳಿಸದಿರಯ್ಯ
ನಿಮ್ಮ ಧರ್ಮ
ಆನು ಭಕ್ತನೆನ್ನಲ್ಲಿ ಲೇಸುಂಟೆಂದು
ಪರಿಣಾಮಿಸಿದರೆ
ನಿಮಗಾನು ದ್ರೋಹಿಯಯ್ಯ
ಕೂಡಲಸಂಗಮದೇವಾ
ನಿಮ್ಮ ಶರಣರ ಲೇಸೇ ಎನ್ನ ಲೇಸಯ್ಯಾ

ಇಂತಹ ಮಿಗಿಲಾದ ಶರಣಧರ್ಮದ ವ್ಯಾಖ್ಯೆ ಯೇನು ? ಅದು ಹೇಗಿರಬೇಕು ಎಂಬುದನ್ನು ತೀರ ಲೌಕಿಕರಿಗೂ ಅರ್ಥವಾಗುವಂತೆ ವಿವರಿಸು ತ್ತಾರೆ.

ಛಲಬೇಕು ಶರಣಂಗೆ ಪರಧನವ ನೊಲ್ಲೆನೆಂಬ
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ
ಛಲಬೇಕು ಶರಣಂಗೆ ಲಿಂಗ ಜಂಗಮ
ಒಂದೆ ಎಂಬ
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ
ಛಲವಿಲ್ಲದವರ ಮೆಚ್ಚ ನಮ್ಮ ಕೂಡಲ
ಸಂಗಮದೇವ

ಇಲ್ಲಿ ಛಲವೆಂದಲ್ಲಿ ಏಕಾಗ್ರ ಚಿತ್ತ, ಏಕೋ ನಿಷ್ಠೆ ಎಂಬುದಾಗಿ ತಿಳಿಯುವುದು ಮುಖ್ಯ. ಪರಧನ, ಪರಸತಿ, ಪರದೈವಗಳು ಶರಣನಿಗೆ ದೂರ ವೆಂಬುದನ್ನೂ ಲಿಂಗ, ಜಂಗಮ ಒಂದೇ ಎಂಬ ನಿಷ್ಠೆಯೂ, ಪ್ರಸಾದ ದಿಟ ವೆಂಬ ನಂಬಿಕೆಯೂ ಮುಖ್ಯವಾಗಿರಬೇಕು. ಈ ರೀತಿಯ ಶರಣಧರ್ಮ ವನ್ನು ಸಾಧಿಸಿದವರು ಮಾಡುವ ಭಕ್ತಿಯು ಈ ಪರಿಯದು

ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ
ಅಂಬುಜಕ್ಕೆ ಭಾನುವಿನುದಯದ ಚಿಂತೆ
ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ
ಎನಗೆ ನಮ್ಮ ಕೂಡಲ ಸಂಗಮದೇವನ
ನೆನೆವುದೇ ಚಿಂತೆ

ಅನುಕ್ಷಣ 'ಅವನ' ಚಿಂತೆಯಿಲ್ಲದೆ ನಡೆಯುವ ಶರಣರು – ಶರಣ ಸಂಗ ದೊರೆಯದವರು – ಎಲ್ಲಿ ದ್ದರೂ ವ್ಯರ್ಥವೇ ಎಂಬುದನ್ನು ಒಂದು ಚೆನ್ನಾದ ವಚನದಿಂದ ಬಿಡಿಸಿ ಹೇಳುತ್ತಾರೆ.

ಬಚ್ಚಲ ನೀರು ತಿಳಿದರೇನು
ಸಲ್ಲದ ಹೊನ್ನು ಮತ್ತೆಲ್ಲಿದ್ದರೇನು

ಸಟೆಯಿಲ್ಲದಂತೆ ಪ್ರಪಂಚುವಿಲ್ಲದಂತೆ ವೈಶಿಕವಿಲ್ಲದಂತೆ ನಡೆಸಯ್ಯ ಲಿಂಗ ತಂದೆ
ಒಂದು ನಿಮಿಷವಾದರೂ ನಿಮ್ಮ ಶರಣ ಸಂಗದಲ್ಲಿರಿಸಯ್ಯ
ಬೇರೆ ಮತ್ತೆ ಅನ್ಯವ ತೋರದಿರಯ್ಯ
ಹೊಲಬುಗೆಟ್ಟೆನಯ್ಯಾ ಕೂಡಲಸಂಗಮದೇವಾ

ಕುದುರನೇಸು ತೊಳೆದರೂ ಕೆಸರು ಮಾಣ್ಬುದೇ
ಎನ್ನ ಕಾಯದೊಳುಳ್ಳವಗುಣವ ಕಳೆದು
ಕೃಪೆಯ ಮಾಡಯ್ಯ
ಕಂಬಳಿಯಲ್ಲಿ ಕಣಕವ ನಾದಿದಂತೆ
ಕಾಣಿರೇ ಎನ್ನ ಮನ
ಕೂಡಲ ಸಂಗಮ ದೇವಾ
ನಿಮಗೆ ಶರಣೆಂದು ಶುದ್ಧ ಕಾಣಯ್ಯ

ಆಕಾಶದ ಮಾವಿನ ಫಲವೆಂದರೇನು
ಕೊಯ್ಯಲಿಲ್ಲ ಮೆಲ್ಲಲಿಲ್ಲ
ಕೂಡಲಸಂಗನ ಶರಣರ
ಅನುಭಾವವಿಲ್ಲದವರು
ಎಲ್ಲಿದ್ದರೇನು ಎಂತಾದರೇನು

ಬಸವಣ್ಣ ತಾವು ಒಳ್ಳೆಯ ವಚನಗಳನ್ನು ಕಟ್ಟಿ ಜೀವನದಲ್ಲಿ ಮಾರ್ಗದರ್ಶಕರಾಗಿ ನಡೆದುಕೊಂಡದ್ದಷ್ಟೇ ಅಲ್ಲ, ಮಾತು ಹೇಗಿರಬೇಕು ಎಂಬುದನ್ನು ಇತರರಿಗೆ ತಿಳಿಸಿ, ಸಾಕಷ್ಟು, ವಚನಕಾರರಿಗೆ ಸ್ಫೂರ್ತಿಯನ್ನೂ ಒದಗಿಸಿದರು. ಅವರು ಹೇಳುವಂತೆ ;

ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು
ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲ ಸಂಗಮದೇವನೆಂತೊಲಿವನಯ್ಯ ?

—ಇಲ್ಲಿ ನುಡಿಯ ಬಗ್ಗೆಯೇ ಅಲ್ಲದೆ ಬರುಬರುತ್ತ ನಡೆಯ ಬಗ್ಗೆಯೂ ಅವಧಾರಣೆಯಾಗಿ ಕೂಡಲ ಸಂಗನ ಒಲುಮೆಯ ಪರಿಯ ಅವರಣ ಇಡೀ ವಚನಕ್ಕೆ ಹೊಂದಿಕೊಂಡು ಅರ್ಥದ ಹೊರಳು ಹೊಸದಾಗುವುದು. 'ನಿಮ್ಮ ಚರಣ ಕಮಲದೊಳಗಾನು ತುಂಬಿ' ಎನ್ನುವಂತೆ ಕೊನೆಯಾಗುವ 'ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ' ಎನ್ನುವ ವಚನವೂ ಇದೇ ರೀತಿಯಲ್ಲಿ ಹೊರಳುವುದು ಅರ್ಥದ ಪರಿಯಲ್ಲಿ. ಆ ಪದಗಳು ಆ ವಿಧಗಳು – ಬಸವಣ್ಣನವರಿಗೇ ಮೀಸಲು. ಎಂತಲೇ ಅಲ್ಲಮ ಪ್ರಭು ಸಿದ್ಧರಾಮನಿಗೆ ಬಸವಣ್ಣನ ಮಹಿಮೆಯನ್ನು ತಿಳಿಸುತ್ತ ಹೇಳುವ ಮಾತು ಬಸವಣ್ಣ ಹಿರಿಮೆಯನ್ನು ಸ್ಪಷ್ಟಗೊಳಿಸುತ್ತದೆ.

ಕಲ್ಯಾಣ ವೆಂಬ ಪ್ರಣತೆಯಲ್ಲಿ
ಭಕ್ತಿ ರಸವೆಂಬ ತೈಲವನೆರೆದು
ಆಚಾರವೆಂಬ ಬತ್ತಿಯಲ್ಲಿ
ಬಸವಣ್ಣನೆಂಬ ಜ್ಯೋತಿಯ ತೊಳಗಿ
ಬೆಳಗುತ್ತಿರ್ದುದಯ್ಯ ಶಿವನ ಪ್ರತಾಪ

ಹೀಗೆ ಹಲವು ಹನ್ನೊಂದು ರೀತಿಯಲ್ಲಿ ಸಮಾಜದ ಓರೆ ಕೋರೆಗಳನ್ನು ತಿದ್ದುತ್ತ ತಾವು ಉದ್ಧಾರವಾದದ್ದೇ ಅಲ್ಲದೇ ಇತರರನ್ನೂ ಉದ್ಧಾರದತ್ತ ಕರೆದೊಯ್ದು ಸಾಮಾಜಿಕವಾಗಿ, ಧಾರ್ಮಿಕವಾಗಿ ಒಂದು ಹೊಸ ತಿರುವನ್ನು, ಹೊಸ ಅವಕಾಶವನ್ನು ಕಲ್ಪಿಸಿಕೊಟ್ಟದ್ದಕ್ಕಾಗಿ ಬಸವಣ್ಣನವರಿಗೆ ಜನ ಕೈಮುಗಿಯ ಬೇಕಾದ್ದು ಕರ್ತವ್ಯವಾಗುತ್ತದೆ. ★

---

# ರಾಮಾನುಜಾಚಾರ್ಯ

ಶ್ರೀ ರಾಮಾನುಜರು ತಮ್ಮ ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಕಾರ ಬ್ರಹ್ಮ ಜೀವ, ಜಗತ್ತು ಎಲ್ಲವನ್ನು ಸತ್ಯವೆಂದು ಘೋಷಿಸಿ, ಭಕ್ತಿ ಮತ್ತು ಪ್ರಪತ್ತಿಗಳಿಂದ ಪರಿಪೋಷಿತವಾದ ಶರಣಾಗತಿಯೇ ಮೋಕ್ಷಕ್ಕೆ ಸಾಧನ ಎಂದು ಹೇಳಿ ಜೀವಿಯ ಉನ್ನತಿಗೆ ಮಾರ್ಗದರ್ಶನವನ್ನು ನೀಡಿದಂತಹ ಮಹಾನುಭಾವರು.

ಶ್ರೀ ರಾಮಾನುಜಾಚಾರ್ಯರು ಕ್ರಿ.ಶ. 1017 ರಲ್ಲಿ ಕಾಂಚಿಯ ಬಳಿ ಪೆರಂಬೂರು ಎಂಬ ಸ್ಥಳದಲ್ಲಿ ಜನಿಸಿದರು. ಅವರ ತಂದೆ ಕೇಶವಾಚಾರ್ಯ ಮತ್ತು ತಾಯಿ ಕಾಂತಿಮತಿ. ಮೇಧಾವಿ ರಾಮಾನುಜರ ಗುರು ಯಾದವ ಪ್ರಕಾಶ ಎಂಬ ಅದ್ವೈತ ಸಿದ್ಧಾಂತಿ. ಅದ್ವೈತತತ್ತ್ವವನ್ನು ಒಪ್ಪದ್ದರಿಂದ ಗುರು ಶಿಷ್ಯರೊಳಗೆ ಭಿನ್ನಾಭಿಪ್ರಾಯ ಬೆಳೆದು ಕೊನೆಗೆ ಅವರ ಸಂಬಂಧವೂ ಹರಿದು ಬಿತ್ತು. ದುರಾದೃಷ್ಟವಶಾತ್ ರಾಮಾನುಜಾಚಾರ್ಯರ ಪತ್ನಿಯು ಒರಟು ಸ್ವಭಾವದವಳೂ, ಜಗಳಗಂಟಿಯೂ ಆಗಿದ್ದು, ಪತಿಯ ಉನ್ನತ ಆದರ್ಶಗಳನ್ನು ಅರ್ಥಮಾಡಿಕೊಳ್ಳದವಳಾಗಿದ್ದಳು. ಇದರಿಂದ ನಿರಾಶೆಗೊಂಡ ರಾಮಾನುಜರು ಸನ್ಯಾಸವನ್ನು ಸ್ವೀಕರಿಸಿ, ಶ್ರೀರಂಗದ ಧರ್ಮ ಸಿಂಹಾಸನವನ್ನು "ಯತಿರಾಜ" ರೆಂಬ ಬಿರುದಿನಲ್ಲಿ ಅಲಂಕರಿಸಿದರು.

ಶೈವ ಪಕ್ಷಪಾತಿಯಾದ ಚೋಳರಾಜ ಕುಲೋತ್ತುಂಗನು ವೈಷ್ಣವರಾದ ರಾಮಾನುಜರನ್ನು, ಅವರ ಶಿಷ್ಯರನ್ನೂ, ಕಿರುಕುಳಕ್ಕೊಳಪಡಿಸಿದುದರಿಂದ ಆಚಾರ್ಯರು ಚೋಳರಾಜ್ಯದಿಂದ ದೂರವಾಗಿ ಮೈಸೂರು ಸೀಮೆಗೆ ಬಂದರೆಂದೂ, ಇಲ್ಲಿ ಹೊಯ್ಸಳರಾಜ ಬಿಟ್ಟಿದೇವನು ರಾಮಾನುಜರ ಪ್ರಭಾವಕ್ಕೊಳಗಾಗಿ ವೈಷ್ಣವ ಧರ್ಮವನ್ನು ಅವಲಂಬಿಸಿ ವಿಷ್ಣುವರ್ಧನನೆಂಬ ಹೆಸರನ್ನು ಇಟ್ಟುಕೊಂಡನೆಂದೂ ಐತಿಹ್ಯವಿದೆ. ಇವರು ಮೈಸೂರಿನ ಸಾಲಿಗ್ರಾಮ, ತೊಂಡನೂರು, ಮೇಲುಕೋಟೆಗಳಲ್ಲಿ ನೆಲೆಸಿ, ವೈಷ್ಣವ ಧರ್ಮ ಪ್ರಚಾರಕ್ಕೆ ಹೆಚ್ಚಿನ ಹುರುಪನ್ನು ನೀಡಿದರು. ಮೇಲು ಕೋಟೆಯು ವೈಷ್ಣವರ ಒಂದು ಕೇಂದ್ರವಾಗಿ ಮಾರ್ಪಟ್ಟಿತು. ಚೋಳರಾಜನ ಮರಣಾನಂತರ ರಾಮಾನುಜರು ಶ್ರೀರಂಗಕ್ಕೆ ಹಿಂದಿರುಗಿ, ತಮ್ಮ ನೂರಿಪ್ಪತ್ತನೇ ವಯಸಿನಲ್ಲಿ, ಅಂದರೆ ಕ್ರಿ. ಶ. 1137 ರಲ್ಲಿ ಭಗವಂತನ ಸಾಯುಜ್ಯವನ್ನು ಪಡೆದರು. ರಾಮಾನುಜರು ಅನೇಕ ಗ್ರಂಥಗಳನ್ನು ಬರೆದರು. ಅವುಗಳಲ್ಲಿ ಪ್ರಮುಖವಾದವುಗಳು ವೇದಾಂತಸಾರ, ವೇದಾಂತ ಸಂಗ್ರಹ, ವೇದಾಂತದೀಪ ಮತ್ತು ಭಗವದ್ಗೀತೆ ಹಾಗೂ ಬ್ರಹ್ಮಸೂತ್ರಗಳ ಮೇಲೆ ಭಾಷ್ಯಗಳು. ಅದರಲ್ಲಿ ಕೊನೆಯದು ಶ್ರೀವೈಷ್ಣವರಿಗೆ ಬಹು ಮಹತ್ತರವಾದ ಗ್ರಂಥ; ಅದನ್ನೇ ಶ್ರೀಭಾಷ್ಯವೆಂದು ಕರೆಯುತ್ತಾರೆ.

ರಾಮಾನುಜಾಚಾರ್ಯರು ಪ್ರತಿಪಾದಿಸಿದ ವೇದಾಂತ ತತ್ತ್ವವನ್ನು ವಿಶಿಷ್ಟಾದ್ವೈತವೆಂದು ಕರೆಯುತ್ತಾರೆ. ಈ ಸಿದ್ಧಾಂತವನ್ನು ಇವರು ತಮಿಳುನಾಡಿನ ದೇವಭಕ್ತ ಶಿರೋಮಣಿಗಳಾದ ಆಳ್ವಾರರ ದಿವ್ಯ ಅನುಭವಗಳು, ಪ್ರಸ್ಥಾನತ್ರಯ ಭಾಗವತ ಮತ್ತು ಪಾಂಚರಾತ್ರ ಆಗಮ ಎಂಬೀ ಗ್ರಂಥಗಳ ಆಧಾರದಿಂದ ಪ್ರತಿಪಾದಿಸಿದ್ದಾರೆ.

ವಿಶಿಷ್ಟಾದ್ವೈತ ಎಂದರೆ ವಿಶೇಷಣಗಳಿಂದ ಕೂಡಿರುವ ಅದ್ವೈತ ಎಂದು ಅರ್ಥ. ಎರಡಿಲ್ಲದೆ ಒಂದೇ ಆಗಿರುವುದು ಬ್ರಹ್ಮ. ಚಿತ್ ಮತ್ತು ಅಚಿತ್ ಎಂಬುವು ಅದರ ವಿಶೇಷಣಗಳು. 'ಬ್ರಹ್ಮವು ಈ ವಿಶೇಷಣಗಳಿಂದ ಕೂಡಿದ್ದು ಏಕಮೇವಾದ್ವಿತೀಯವಾಗಿದೆ' ಎಂಬುದು ವಿಶಿಷ್ಟಾದ್ವೈತ ಮತದ ಮೂಲವಾದ ತತ್ತ್ವವಾಗಿರುತ್ತದೆ.

ಶಂಕರರ ಅದ್ವೈತವಾದವನ್ನು ರಾಮಾನುಜರು ಒಪ್ಪಲಿಲ್ಲ. ಅದ್ವೈತದ ನಿರ್ಗುಣ ಬ್ರಹ್ಮನು ಮನಸ್ಸಿಗೆ ಯಾವ ಭಾವನೆಯನ್ನೂ ಮಾಡಿಸನು. ಅದು ಸಾಮಾನ್ಯ ಮನಸ್ಸಿಗೆ ನಿಲುಕದಂತಹುದು. ರಾಮಾನುಜರ ತತ್ತ್ವದಂತೆ "ಅನಂತ ಕಲ್ಯಾಣ ಗುಣ ಪರಿಪೂರ್ಣ ಬ್ರಹ್ಮ ಭುವನಸುಂದರ, ಸರ್ವಶಕ್ತ, ಮೋಕ್ಷದಾಯಕ, ಬ್ರಹ್ಮವು ಶರೀರ ಧಾರಿಯಾಗಿ ಕಾಣಿಸುತ್ತದೆ, ದೇವನು ಪುರುಷೋತ್ತಮನಾಗುತ್ತಾನೆ".

ವಿಶಿಷ್ಟಾದ್ವೈತ ಮತದಲ್ಲಿ ಇರುವ ಮುಖ್ಯ ತತ್ತ್ವಾಂಶಗಳು ಮೂರು:—ಬ್ರಹ್ಮ, ಚಿತ್ ಮತ್ತು ಅಚಿತ್. ಬ್ರಹ್ಮ ಎಂದರೆ ಪರವಸ್ತು, ದೇವರು, ಪರಮಾತ್ಮ. ಚಿತ್ ಎಂದರೆ ಆತ್ಮ. ಅಚಿತ್ ಎಂದರೆ ಜಡವಸ್ತು. ಚಿತ್ ಮತ್ತು ಅಚಿತ್ ಬ್ರಹ್ಮನ ಶರೀರಗಳಾಗುತ್ತವೆ. ಈ ಶರೀರದಿಂದ ಕೂಡಿರುವ ಬ್ರಹ್ಮನು ಒಬ್ಬನೇ ಆಗಿದ್ದಾನೆ. ಚಿತ್ ಮತ್ತು ಅಚಿತ್ ಬ್ರಹ್ಮನಿಂದ ಬೇರೆಯಾದರೂ ಅವನಲ್ಲಿದ್ದುಕೊಂಡು ಅವನಿಗೆ ಅಧೀನವಾಗಿವೆ. ಬ್ರಹ್ಮನು ಮಾತ್ರ ಇವುಗಳಿಂದ ವಿಶಿಷ್ಟನಾಗಿದ್ದು ಏಕನೂ, ನಿತ್ಯನೂ, ಶಾಶ್ವತನೂ ಆಗಿರುತ್ತಾನೆ. ಹೀಗೆ ಚಿತ್ ಮತ್ತು ಅಚಿತ್ ನಿಂದ ವಿಶಿಷ್ಟನಾಗಿ ಒಂದೇ ತತ್ತ್ವವಾಗಿರುವ ಬ್ರಹ್ಮನನ್ನು ಆಧರಿಸಿ ತತ್ತ್ವಗಳನ್ನು ಪ್ರತಿಪಾದಿಸಿರುವ ಈ ಮತಕ್ಕೆ ವಿಶಿಷ್ಟಾದ್ವೈತಮತ ಎಂದು ಹೆಸರು ಬಂದಿರುತ್ತದೆ.



## ಬ್ರಹ್ಮ :

ಚಿತ್ ಮತ್ತು ಅಚಿತ್‌ಗಳಿಂದ ಬ್ರಹ್ಮನು ಕೂಡಿದ್ದು ಏಕನೂ, ನಿರ್ದೋಷಿಯೂ ನಿತ್ಯನೂ ಶಾಶ್ವತನೂ ಆಗಿರುತ್ತಾನೆ. ಬ್ರಹ್ಮನು ಸಮಸ್ತ ಕಲ್ಯಾಣ ಗುಣ ಪರಿಪೂರ್ಣನಾಗಿರುತ್ತಾನೆ. ಸರ್ವಾಂತರ್ಯಾಮಿ ಮತ್ತು ಸತ್ಯ ಜ್ಞಾನಮಯನಾಗಿರುವುದು ಮಾತ್ರವಲ್ಲದೆ, ಅನಂತನೂ ಸರ್ವವ್ಯಾಪಿಯೂ ಆಗಿರುತ್ತಾನೆ. ಬ್ರಹ್ಮನನ್ನು ಈಶ್ವರ, ಆತ್ಮ, ಈಶ, ನಾರಾಯಣ, ವಾಸುದೇವ, ಪುರುಷೋತ್ತಮ ಎಂಬ ವಿವಿಧ ಹೆಸರುಗಳಿಂದ ಕರೆಯಲಾಗಿದೆ. ಈಶ್ವರ ತತ್ತ್ವದಲ್ಲಿ ಮೂರು ವಿವರಗಳು ಸೇರುತ್ತವೆ. ಅವು ಯಾವುವೆಂದರೆ (1) ಬ್ರಹ್ಮ ಮತ್ತು ಈಶ್ವರ ಒಂದೇ ಆಗಿದ್ದು ಈಶ್ವರನೇ ಬ್ರಹ್ಮ (2) ಈಶ್ವರನು ಅಂತರ್ಯಾಮಿ. (3) ಈಶ್ವರನು ಸರ್ವಕರ್ಮಗಳಿಗೂ ಅತೀತನು, ಪರಮಪುರುಷನು ಪೂರ್ಣನು, ಅವನೇ ಜಗತ್ಪತಿ.

ಬ್ರಹ್ಮನು ವಿಶೇಷಗಳಿಂದ ಕೂಡಿದ್ದು ಅವನಿಂದ ವ್ಯಕ್ತವಾಗುವ ಈ ಜಗತ್ತು ಸ್ಥೂಲ, ಸೂಕ್ಷ್ಮ ಎಂಬ ಎರಡು ಅವಸ್ಥೆಗಳನ್ನು ಹೊಂದಿರುತ್ತದೆ. ಸ್ಥೂಲವು ವ್ಯಕ್ತವಾದರೆ ಸೂಕ್ಷ್ಮವು ಅವ್ಯಕ್ತವಾ

**ಶ್ರೀಮತಿ ಎ. ಎಸ್. ಪಂಕಜ**
ಎಂ.ಎ., ಬಿ.ಇಡಿ.

ಗಿದೆ. ವ್ಯಕ್ತವಾದುದರ ಹಿನ್ನೆಲೆಯಲ್ಲಿರುವವನೇ ಅಂದರೆ ಸ್ಥೂಲ ಅವಸ್ಥೆಯನ್ನು ಹೊಂದಿ ಚಿತ್ ಮತ್ತು ಅಚಿತ್‌ಗಳಿಂದ ವಿಶಿಷ್ಟನಾದವನೇ ಬ್ರಹ್ಮ. ವಿಶಿಷ್ಟಾದ್ವೈತದಲ್ಲಿ ಬ್ರಹ್ಮನನ್ನು ಹೆಚ್ಚಾಗಿ ಈಶ್ವರ ಎಂಬ ಹೆಸರಿನಿಂದಲೇ ವ್ಯವಹರಿಸಲಾಗಿರುತ್ತದೆ. ಈಶ್ವರನ ಶಕ್ತಿಯೇ ಶ್ರೀ ಅಥವಾ ಲಕ್ಷ್ಮೀ. ಈಶ್ವರನು ಷಡ್‌ಗುಣ ಸಂಪನ್ನನಾಗಿದ್ದು ಭಗವಂತನಾಗಿರುತ್ತಾನೆ. ಜ್ಞಾನ, ಶಕ್ತಿ, ಐಶ್ವರ್ಯ, ಬಲ, ವೀರ್ಯ, ತೇಜಸ್ಸು ಇವುಗಳೇ ಷಡ್ಗುಣಗಳು. ಈ ಷಡ್ಗುಣಗಳು ಉಳ್ಳವನೇ ಭಗವಂತ.

ಈಶ್ವರನ ಸಾಕಾರರೂಪವೇ ಪಂಚಕ. ಈಶ್ವರನು ಏಕಮೇವಾದ್ವಿತೀಯನಾದರೂ ಭಕ್ತರ ಪ್ರಾರ್ಥನೆಯಂತೆ ಭಕ್ತೋದ್ಧಾರಕ್ಕಾಗಿ ಜಗತ್ತಿನಲ್ಲಿ ದೇಹಧಾರಿಯಾಗಿ ಐದುರೂಪಗಳಲ್ಲಿ ಪ್ರಕಟಗೊಳ್ಳುತ್ತಾನೆ. ಅವು ಯಾವುವೆಂದರೆ – ಪರ, ವ್ಯೂಹ, ವಿಭವ, ಅಂತರ್ಯಾಮಿ ಮತ್ತು ಅರ್ಚಾವತಾರ.

## ಜೀವ :

ಜೀವನು ಚಿತ್ ಸ್ವರೂಪನಾಗಿದ್ದು ಬ್ರಹ್ಮನ ಅಂಶವಾಗಿರುತ್ತಾನೆ. ಜೀವನು ಇಚ್ಛೆ, ಜ್ಞಾನ, ಕ್ರಿಯೆಗಳಿಂದ ಕೂಡಿದ್ದು, ಕರ್ತನೂ ಭೋಕ್ತೃವೂ ಆಗಿದ್ದು ಬ್ರಹ್ಮನಿಂದ ಆಗಿರುವುದು ಮಾತ್ರವಲ್ಲದೆ, ಪರತಂತ್ರನೂ ಆಗಿರುತ್ತಾನೆ. ಜೀವನು ಸತ್ಯನಾಗಿದ್ದು ಅಣುಸ್ವರೂಪನಾಗಿ ಹೃದಯದಲ್ಲಿರುತ್ತಾನೆ. ದೀಪದ ಬೆಳಕಿನಂತೆ ಜೀವನು ತನ್ನ ಚೈತನ್ಯದಿಂದ ದೇಹವನ್ನೆಲ್ಲಾ ವ್ಯಾಪಿಸಿರುತ್ತಾನೆ. ಅವನು ಅತಿ ಸೂಕ್ಷ್ಮನಾಗಿದ್ದು ಸರ್ವಾಂತಃಪ್ರವೇಶ ಸಾಮರ್ಥ್ಯದಿಂದ ಕೂಡಿರುತ್ತಾನೆ. ಜೀವರು ಅನಂತ. ಜೀವನು ಪರಮಾತ್ಮನಿಂದ ಬೇರೆಯಾದ ಚಿತ್ ವಸ್ತುವಾದರೂ ಪರಮಾತ್ಮನು ಜೀವಿಯ ಅಂತರ್ಯಾಮಿಯಾಗಿ ಜೀವಾತ್ಮರುಗಳಿಗೆ ಆತ್ಮನಾಗಿರುತ್ತಾನೆ. ಜೀವನು ಅಗೋಚರನೂ, ನಿತ್ಯನೂ ಅವ್ಯಯನೂ ಆಗಿರುತ್ತಾನೆ.

## ಜೀವ ಮತ್ತು ಈಶ್ವರ ಸಂಬಂಧ :

ಶ್ರೀ ರಾಮಾನುಜರ ದರ್ಶನದಲ್ಲಿ ಜೀವ ಮತ್ತು ಈಶ್ವರ ಸಂಬಂಧವನ್ನು ಶೇಷ ಶೇಷೀ ಸಂಬಂಧ ಎಂದು ನಿರೂಪಿಸಲಾಗಿದೆ. ಶೇಷಿ ಎಂದರೆ ಒಡೆಯ ಶೇಷ ಎಂದರೆ ಒಡೆಯನಿಗೆ ಅಧೀನವಾದವನು. ಎಂದರ್ಥ. ಭಗವಂತನು ಜೀವರುಗಳ ಒಡೆಯನಾಗಿದ್ದು ಜೀವರುಗಳು ಭಗವಂತನಿಗೆ ಅಧೀನವಾಗಿರುತ್ತಾರೆ. ಈ ಜೀವೇಶ್ವರ ಸಂಬಂಧವು ಸಾಮಾನ್ಯವಾಗಿ ಒಂಬತ್ತು ವಿಧಗಳಲ್ಲಿ ಜೀವನದಲ್ಲಿ ಪ್ರಕಟಗೊಳ್ಳುತ್ತದೆ. ಅವು ಯಾವುವೆಂದರೆ (1) ಪಿತ ಪುತ್ರ ಸಂಬಂಧ (2) ರಕ್ಷ್ಯ ರಕ್ಷಕ ಸಂಬಂಧ (3) ಶೇಷ ಶೇಷಿ ಸಂಬಂಧ (4) ಪತಿ ಪತ್ನಿ ಸಂಬಂಧ (5) ಜ್ಞಾತೃ ಜ್ಞೇಯ ಸಂಬಂಧ (6) ಸ್ವ ಸ್ವಾಮಿ ಸಂಬಂಧ (7) ಆಧಾರ ಆಧೇಯ ಸಂಬಂಧ (8) ಶರೀರ ಶರೀರಿ ಸಂಬಂಧ (9) ಭೋಕ್ತೃ ಭೋಗ್ಯಸಂಬಂಧ.

## ಜಗತ್ತು

ಅಚಿತ್‌ನಿಂದ ಅಥವಾ ಪ್ರಕೃತಿಯಿಂದ ಆಗಿರುವುದೇ ಜಗತ್ತು. ಜಗತ್ತನ್ನು ಸೃಷ್ಟಿ ಮಾಡಿದವನು ಈಶ್ವರ. ಈಶ್ವರನ ಲೀಲೆಯಿಂದಾಗಿ ಈ ಜಗತ್ತು ಸೃಷ್ಟಿಯಾಗಿದೆ. ಜಗತ್ತು ಹಾಗೂ ಜಗತ್ತಿನ ಚರಾಚರ ವಸ್ತುಗಳನ್ನು ಸೃಷ್ಟಿ ಮಾಡಿರುವ ಈಶ್ವರನು ಜಗತ್ತಿನ ಆಧಾರವಾಗಿರುತ್ತಾನೆ. ಜಗತ್ತು ಮಿಥ್ಯೆಯಲ್ಲ; ಅದು ಸತ್ಯವಾಗಿದ್ದು ಭಗವಂತನಿಂದ ಭಿನ್ನವಾಗಿದ್ದು ಅವನ ಶಕ್ತಿಯಿಂದ ಕೂಡಿರುತ್ತದೆ. ಜಗತ್ತಿನಿಂದ ಈಶ್ವರನಿಗೆ ಏನೂ ಪ್ರಯೋಜನವಿಲ್ಲ. ಈಶ್ವರನು ಪೂರ್ಣ ಪುರುಷನು, ಸತ್ಯ ಸಂಕಲ್ಪನು. ಆದರೆ "ಸ್ವಸಂಕಲ್ಪಕೃತಮ್"– ಅಂದರೆ ಸ್ವಂತ ಸಂಕಲ್ಪದಿಂದ, ಲೀಲಾ ವಿಲಾಸದಿಂದ ಈಶ್ವರನು ಈ ಜಗತ್ತನ್ನು ಸೃಷ್ಟಿಸಿರುತ್ತಾನೆ.

## ಮಾಯೆ :

ಮಾಯೆಯು ಭಗವಂತನ ಅದ್ಭುತ ಶಕ್ತಿಯಾಗಿದ್ದು ಅದೇ ಪ್ರಕೃತಿ ಎಂದೂ ಕರೆಯಲ್ಪಟ್ಟಿರುತ್ತದೆ. ಸ್ಥೂಲವಾಗಿ ಪ್ರಕಟಗೊಂಡಿರುವಾಗ ಅದನ್ನು ಪ್ರಕೃತಿ ಎಂದೂ ಅದೇ ಸೂಕ್ಷ್ಮ ಅವಸ್ಥೆಯಲ್ಲಿ ಇದ್ದಾಗ ಮಾಯೆ ಎಂದು ಕರೆಯಲಾಗಿದೆ. ಮಾಯೆ ಎಂದರೆ ಭ್ರಮೆ ಅಥವಾ ಮಿಥ್ಯೆ ಎಂದು ಅರ್ಥವಲ್ಲ. ಅದು ಸತ್ಯ ಹಾಗೂ ಸತ್ವಪೂರ್ಣವಾದುದಾಗಿರುತ್ತದೆ.

## ಜೀವರುಗಳ ಕರ್ಮಬಂಧ :

ಜೀವಿಗಳು ಅಜ್ಞಾನದಿಂದಾಗಿಯೂ, ಮಮಕಾರದಿಂದಾಗಿಯೂ ಸಂಸಾರ ಚಕ್ರಕ್ಕೆ ತಮ್ಮ ತಮ್ಮ ಕರ್ಮಕ್ಕೆ ಅನುಸಾರವಾಗಿ ಸಿಗುತ್ತಾರೆ. ಕರ್ಮಕ್ಕೆ ಕಾರಣ ಭಗವಂತನ ಲೀಲೆಯಾಗಿದೆ. ಕರ್ಮವು ಅನಾದಿಯಾಗಿದೆ. ಎಂದರೆ ಜೀವರುಗಳಿಗೆ ಅದು ಯಾವಾಗ ಆರಂಭವಾಯಿತು ಎಂದು ಹೇಳಲು ಸಾಧ್ಯವಿಲ್ಲ. ಆದರೆ ಭಗವಂತನ ಕೃಪೆಯಿಂದಲೂ ಯಥೋಚಿತವಾದ ಸಾಧನೆಯಿಂದಲೂ ಜೀವನು ಕರ್ಮಬಂಧನದಿಂದ ಮುಕ್ತನಾಗಿ ಸಂಸಾರ ಚಕ್ರದಿಂದ ಬಿಡುಗಡೆ ಹೊಂದಲೂ ಸಾಧ್ಯವಿದೆ.

## ಜಗತ್ತಿನ ಸೃಷ್ಟಿ :

ದ್ರವ್ಯ ಮತ್ತು ಅದ್ರವ್ಯ ಎಂಬುವುಗಳ ಸಂಯೋಗ ಸಮಷ್ಟಿಯೇ ಜಗತ್ತು. ದ್ರವ್ಯಗಳು ಆರು, ಅದ್ರವ್ಯಗಳು ಹತ್ತು. ಅವು ಯಾವುವೆಂದರೆ ದ್ರವ್ಯ: (1) ಪ್ರಕೃತಿ (2) ಕಾಲ (3) ಶುದ್ಧ ಸತ್ವ (4) ಧರ್ಮ ಭೂತಜ್ಞಾನ (5) ಜೀವ (6) ಈಶ್ವರ. ಅದ್ರವ್ಯ . (1) ಸತ್ವ (2) ರಜಸ್ಸು (3) ತಮಸ್ಸು (4) ಶಬ್ದ (5) ಸ್ಪರ್ಶ (6) ರೂಪ (7) ರಸ (8) ಗಂಧ (9) ಸಂಯೋಗ (10) ಶಕ್ತಿ.

ಸತ್ವ ರಜಸ್ಸು ತಮಸ್ಸುಗಳಿಂದ ಕೂಡಿದ ಗುಣವುಳ್ಳದ್ದು ತ್ರಿಗುಣವಾಗಿದ್ದು ಇದೇ ಸಕಲ ಬ್ರಹ್ಮಾಂಡ ಸೃಷ್ಟಿಗೆ ಮೂಲಕಾರಣವಾಗಿರುತ್ತದೆ. ಇದನ್ನು ಮೂಲ ಪ್ರಕೃತಿ ಎಂದು ಹೇಳುತ್ತಾರೆ. ಸತ್ವ ಎಂದರೆ ಜೀವನ ಸುಖ ಮೊದಲಾದವುಗಳಿಗೆ ಕಾರಣವಾದ ಗುಣ. ರಜಸ್ಸು ಎಂದರೆ ರಾಗ, ದುಃಖ, ಕ್ರಿಯೆ ಮೊದಲಾದವುಗಳಿಗೆ ಕಾರಣವಾದ ಗುಣ. ತಮಸ್ಸು ಎಂದರೆ ನಿದ್ರೆ, ಆಲಸ್ಯ, ಮೋಹ ಮೊದಲಾದವುಗಳಿಗೆ ಕಾರಣವಾದ ಗುಣ.

ಈ ಮೂರು ಗುಣಗಳು ಸಮವಾದ ಅವಸ್ಥೆಯಲ್ಲಿದ್ದರೆ ಪ್ರಲಯ ಎಂದೂ ವಿಷಮಾವಸ್ಥೆಯಲ್ಲಿದ್ದರೆ ಸೃಷ್ಟಿ ಎಂದೂ ಹೇಳುವುದಾಗಿದೆ. ಈ ಮೂಲ ಪ್ರಕೃತಿಯಿಂದ ಮೊದಲು ಮಹತ್ತು ಹುಟ್ಟುತ್ತದೆ. ಮಹತ್ತಿನಿಂದ ಅಹಂಕಾರ, ಅಹಂಕಾರದಿಂದ ಮನಸ್ಸು ಜ್ಞಾನ ಪಂಚೇಂದ್ರಿಯಗಳು, ಕರ್ಮ ಪಂಚೇಂದ್ರಿಯಗಳು, ಪಂಚತನ್ಮಾತ್ರಗಳು, ಪಂಚಮಹಾಭೂತಗಳೂ ಉತ್ಪತ್ತಿಯಾಗುತ್ತವೆ. ಇವುಗಳ ಸಂಯೋಗದಿಂದ ದೇಹವು ಉತ್ಪತ್ತಿಯಾಗಿ ಭಗವಂತನು ಸರ್ವಜೀವರುಗಳ ಅಂತರ್ಯಾಮಿಯಾಗುತ್ತಾನೆ. ಭಗವಂತನು ಜೀವರುಗಳ ಕರ್ಮಗಳಿಗೆ ಅನುಸಾರವಾಗಿ ಅವುಗಳನ್ನು ದೇಹದಲ್ಲಿ ಸಂಯೋಗಗೊಳಿಸುತ್ತಾನೆ.

## ಮೋಕ್ಷ

ವಿಶಿಷ್ಟಾದ್ವೈತದ ಪ್ರಕಾರವಾಗಿ ಮೋಕ್ಷ ಎಂದರೆ ಜೀವನು ಸರ್ವವಿಧ ಪಾಶಗಳಿಂದ ಮುಕ್ತನಾಗಿ ಸಂಸಾರ ದಿಂದ ಬಿಡುಗಡೆ ಹೊಂದುವುದು ಎಂದು ಅರ್ಥ. ಮುಕ್ತಿ ಪಡೆದ ಜೀವನು ಭಗವಂತನಲ್ಲಿ ಐಕ್ಯವಾಗುವುದಿಲ್ಲ. ಸಾರೂಪ್ಯ ಪದವಿ ದಿವ್ಯಜ್ಞಾನದಿಂದ ಕೂಡಿ ಜೀವನು ಭಗವಂತನ ನಿತ್ಯ ಸಾಕ್ಷಾತ್ಕಾರ ಆನಂದವನ್ನು ಅನುಭವಿಸುತ್ತಾ ಇರುತ್ತಾನೆ. ಜೀವನ್ಮುಕ್ತಿ ದೊರೆಯುವುದಿಲ್ಲ ಎಂಬುದು ಈ ಮತದ ಸ್ಪಷ್ಟ ನಿಲವು ಆಗಿರುತ್ತದೆ. ಜೀವನಿಗೆ ಮೋಕ್ಷವು ಭಕ್ತಿಯಿಂದಾಗಿ ಲಭಿಸುತ್ತದೆ. ಜ್ಞಾನ ಮತ್ತು ಕರ್ಮಗಳು ಭಕ್ತಿಗೆ ಸಾಧನಗಳಾಗಿವೆ.

## ಸಾಧನಾ ವಿಚಾರಗಳು :

ವಿಶಿಷ್ಟಾದ್ವೈತ ಮತದಲ್ಲಿ ಭಕ್ತಿಗೆ ಅತ್ಯಂತ ಹೆಚ್ಚಿನ ಮಹತ್ವದ ಸ್ಥಾನವಿದೆ. ಭಕ್ತಿಯೇ ಮೋಕ್ಷಕ್ಕೆ ಸಾಧನವಾಗಿ ಅದರ ಫಲವಾಗಿ

ಮುಕ್ತಿಯೂ ದೊರೆಯುತ್ತದೆ, ಎಂದು ಈ ಮತದಲ್ಲಿ ಹೇಳಲಾಗಿದೆ. ವಿಶಿಷ್ಟಾದ್ವೈತ ಮತದಲ್ಲಿ ವ್ಯಾಖ್ಯಾನಗಳ ಮೂರು ಭಾಗಗಳಿವೆ. ತತ್ತ್ವ, ಹಿತ ಮತ್ತು ಪುರುಷಾರ್ಥ. ಜೀವಾತ್ಮನೇ ತತ್ತ್ವವಾಗಿರುತ್ತಾನೆ. ಅವನನ್ನು ಸೇರಲು ಸಾಧನವಾಗುವ ಭಕ್ತಿ ಪ್ರಪತ್ತಿಗಳೇ ಹಿತ ಎನಿಸಿರುತ್ತದೆ. ಮೋಕ್ಷವೇ ಪುರುಷಾರ್ಥವಾಗಿರುತ್ತದೆ.

## ಭಕ್ತಿ :

ಭಕ್ತಿ ಎಂದರೆ ಜೀವಾತ್ಮನು ಪರಮಾತ್ಮನ ಯಥಾರ್ಥ ಜ್ಞಾನಕ್ಕಾಗಿ ಸಾಧನೆ ಮಾಡುತ್ತ ಭಗವಂತನನ್ನು ಶ್ರದ್ಧೆ ಶರಣಪೂರ್ವಕವಾಗಿ ಪ್ರೀತಿಸುವುದೇ ಆಗಿದೆ. ತನ್ನ ಸರ್ವಸ್ವವನ್ನೂ ಭಗವಂತನಿಗೆ ಅರ್ಪಿಸಿ ಅವನಲ್ಲಿ ಶರಣು ಹೋಗುವುದು ಭಕ್ತಿಯ ಅರ್ಥಕ್ಕೆ ಸೇರಿದ ಆಚರಣಾಂಶವಾಗಿರುತ್ತದೆ. ವರ್ಣಾಶ್ರಮಧರ್ಮಗಳನ್ನು ಅನುಸರಿಸಿ ಭಗವಂತನ ಪಾದಾರವಿಂದಗಳ ಧ್ಯಾನ ಅರ್ಚನೆ, ಪ್ರಣಾಮ ಇತ್ಯಾದಿಗಳನ್ನು ಮಾಡುವುದು ಭಕ್ತಿ, ಅಂದರೆ ಶರೀರಕ್ಕೆ ಸಂಬಂಧಿಸಿದ ಭಕ್ತಿ, ಧ್ಯಾನ, ಧಾರಣ ಇತ್ಯಾದಿಗಳ ಮೂಲಕ ಭಗವಂತನನ್ನು ಪೂಜಿಸುವುದೇ ಮಾನಸಿಕ ಭಕ್ತಿ. ಮಂತ್ರ ಜಪ, ನಾಮ ಸಂಕೀರ್ತನೆ ಇವುಗಳು ವಾಚಿಕ ಭಕ್ತಿ. ಈ ತ್ರಿವಿಧ ಭಕ್ತಿಯೇ ಮೋಕ್ಷಕ್ಕೆ ಸಾಧನವಾಗಿರುತ್ತದೆ. ಭಕ್ತಿ ಸಾಧನೆಗೆ ಸಾಧಕನು ಆಹಾರಶುದ್ಧಿ, ದೇಹಶುದ್ಧಿ, ಮನಃಶುದ್ಧಿ ಉಳ್ಳವನಾಗಿರಬೇಕು. ಸಾಧಕನು ಸದ್ಧರ್ಮ, ಸದಾಚಾರ, ಆದ ಸದ್ವರ್ತನೆಗಳಿಂದ ಕೂಡಿರಬೇಕು. ವಿವೇಕ, ಅಭ್ಯಾಸ, ಕ್ರಿಯೆ, ಕಲ್ಯಾಣ, ಸತ್ಯ, ಆರ್ಜವ, ದಯಾ, ಅಹಿಂಸಾ, ದಾನ, ಅನವಸಾದ ಎಂಬ ಅಂಗಗಳು ಭಕ್ತಿಯ ಸಾಧನಗಳಾಗಿವೆ.

## ಕರ್ಮ ಮತ್ತು ಕೈಂಕರ್ಯ :

ಯಾಗ, ದಾನ, ಹೋಮ, ದೇವತಾರ್ಚನೆ, ತೀರ್ಥಯಾತ್ರೆ, ವೇದಾಧ್ಯಯನ, ವೇದಾಂತ ಪಾಠ, ಪ್ರವಚನ ಇತ್ಯಾದಿಗಳಲ್ಲಿ ಒಂದನ್ನು ಅನುಕೂಲದ ಮೇರೆಗೆ ಅನುಸರಿಸಿ ಅದಕ್ಕೆ ಪೂರಕವಾಗಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ಭಗವಂತನ ಪ್ರೀತ್ಯರ್ಥವಾಗಿ ಕರ್ತವ್ಯ ಎಂಬ ದೃಷ್ಟಿಯಿಂದ, ಸಮರ್ಪಣಬುದ್ಧಿಯಿಂದ ಮಾಡುವುದೇ ಕರ್ಮ. ಕರ್ಮವನ್ನು ಪ್ರೀತಿಯಿಂದ, ಭಗವದರ್ಪಣ ಬುದ್ಧಿಯಿಂದ ಮತ್ತು ಭಗವಂತನ ಅಭಿಮತಕ್ಕೆ ವಿರೋಧವಲ್ಲದ ರೀತಿಯಲ್ಲಿ ಮಾಡುವುದೇ ಕೈಂಕರ್ಯ ಎಂದು ಹೇಳಲಾಗಿದೆ. ಒಟ್ಟಿನಲ್ಲಿ ನಿಷ್ಕಾಮ ಸೇವೆ, ಭಗವಂತನ ಆರಾಧನೆಗೆಂದು ಕೈಕೊಳ್ಳುವ ಎಲ್ಲಾ ಕೆಲಸಗಳೂ ಕೈಂಕರ್ಯ ಎಂದು ಹೇಳಬಹುದು.

## ಪ್ರಪತ್ತಿ :

ಭಗವಂತನಿಗೆ ಸಂಪೂರ್ಣವಾದ ಸಮರ್ಪಣ ಭಾವನೆಯಿಂದ ಶರಣಾಗುವುದೇ ಪ್ರಪತ್ತಿ.

## ರಹಸ್ಯತ್ರಯ :

ವಿಶಿಷ್ಟಾದ್ವೈತ ಮತದಲ್ಲಿ ಚಿತ್, ಅಚಿತ್ ಮತ್ತು ಈಶ್ವರ ಎಂಬ ತತ್ತ್ವತ್ರಯ ಇದ್ದಂತೆ ರಹಸ್ಯತ್ರಯವೂ ಇದೆ. ಅದು ಈ ಮತದ ಮುಖ್ಯಾಂಶವಾಗಿರುತ್ತದೆ ರಹಸ್ಯ ಎಂದರೆ ಗುಟ್ಟು. ರಹಸ್ಯತ್ರಯ ಯಾವುವೆಂದರೆ (1) ತಿರುಮಂತ್ರ (2) ದ್ವಯ (3) ಚರಮ ಶ್ಲೋಕ.

ರಹಸ್ಯತ್ರಯವು ಭಗವಂತನ ನೆಲೆಯನ್ನು ಸೇರಲು ಸಾಧಕನು ಅನುಸರಿಸಬೇಕಾದ ಸಾಧನಾ ಉಪಾಯಗಳ ರೂಪದಲ್ಲಿ ಅವನಿಗೆ ಪೂರ್ಣವಾಗಿ ನೆರವಾಗುವ ಸಾಧನ ಆಗಿರುತ್ತವೆ.

## ತಿರುಮಂತ್ರ :

ಶ್ರೀವೈಷ್ಣವ ದೀಕ್ಷೆಯನ್ನು ಕೈಕೊಂಡಾಗ ಗುರುವಿನಿಂದ ಪಡೆಯುವ ಪವಿತ್ರವಾದ ಅಷ್ಟಾಕ್ಷರಗಳಿಂದ ಕೂಡಿದ "ಓಂ ನಮೋ ನಾರಾಯಣಾಯ" ಎನ್ನುವ ಮಂತ್ರವೇ ತಿರುಮಂತ್ರವಾಗಿದೆ.

## ದ್ವಯ :

ದ್ವಯದ ಮಂತ್ರ ಹೀಗಿದ್ದು ಅದನ್ನು ಪ್ರತಿಯೊಬ್ಬ ಶ್ರೀವೈಷ್ಣವನೂ ಜೀವನದಲ್ಲಿ ಆಚರಣೆಗೆ ತರಬೇಕು. "ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ, ಶ್ರೀಮತೇ ನಾರಾಯಣಾಯ ನಮಃ" ಎನ್ನುವುದೇ ಆ ಪವಿತ್ರವಾದ ದ್ವಯ ಮಂತ್ರ.

## ಚರಮ ಶ್ಲೋಕ :

ಶ್ರೀಮದ್ ಭಗವದ್ಗೀತೆಯ ಹದಿನೆಂಟನೇ ಅಧ್ಯಾಯದ ಅರವತ್ತಾರನೇ ಶ್ಲೋಕಕ್ಕೆ ವಿಶಿಷ್ಟಾದ್ವೈತ ಮತದಲ್ಲಿ ನೀಡಿದಿರುವ ಹೆಸರಾಗಿದೆ.

ಸರ್ವ ಧರ್ಮಾನ್ ಪರಿತ್ಯಜ್ಯ<br>
ಮಾಮೇಕಂ ಶರಣಂ ವ್ರಜ !<br>
ಅಹಂ ತ್ವಾ ಸರ್ವಪಾಪೇಭ್ಯೋ<br>
ಮೋಕ್ಷಯಿಷ್ಯಾಮಿ ಮಾ ಶುಚಃ ॥

ಎಂಬುದೇ ಚರಮ ಶ್ಲೋಕವೆಂದು ಕರೆಯಲ್ಪಟ್ಟಿರುವ ಗೀತಾಶ್ಲೋಕವಾಗಿದೆ. ಈ ಶ್ಲೋಕದಲ್ಲಿ ಸಾಧಕನು ಸಾಧನೆ ಮಾಡಿದನಂತರ ಪರಿತ್ಯಾಗ ಮಾಡಬೇಕಾದ ಸೂಚನೆ ಇರುವಂತೆ ಭಗವಂತನಲ್ಲಿ ಸಂಪೂರ್ಣ ಶರಣಾಗತಿಯ ಧರ್ಮದ ತತ್ತ್ವವೂ ಅಡಕವಾಗಿರುತ್ತದೆ. ವಿಶಿಷ್ಟಾದ್ವೈತದ ದರ್ಶನದಸಾರವು ತ್ಯಾಗ, ಭಗವಂತದಲ್ಲಿ ಅನನ್ಯವಾದ ವಿಶ್ವಾಸ ಮತ್ತು ಸಂಪೂರ್ಣಶರಣಾಗತಿಯೇ ಆಗಿರುತ್ತದೆ. ಚರಮ ಶ್ಲೋಕದ ಅರ್ಥ ಹೀಗಿದೆ "ಸರ್ವ ಧರ್ಮಗಳನ್ನು ಪರಿತ್ಯಾಗ ಮಾಡಿ ನನ್ನೊಬ್ಬನನ್ನೇ ಶರಣಹೊಂದು, ನಾನು ನಿನ್ನನ್ನು ಸರ್ವ ಪಾಪಗಳಿಂದ ಬಿಡಿಸುವೆನು, ಶೋಕಿಸಬೇಡ" ಈ ಚರಮ ಶ್ಲೋಕದಲ್ಲಿ ಹೇಳಿರುವ ವಿಚಾರಗಳನ್ನು ಪ್ರತಿಯೊಬ್ಬ ಶ್ರೀವೈಷ್ಣವನೂ ಸರಿಯಾಗಿ ಅರ್ಥ ಮಾಡಿಕೊಂಡು ಅದಕ್ಕೆ ಅನುಗುಣವಾಗಿ ತನ್ನ ಜೀವನವನ್ನು ನಿರ್ವಹಿಸಬೇಕು. ಎಂಬುದು ವಿಶಿಷ್ಟಾದ್ವೈತ ಮತದ ಹೇಳಿಕೆಯಾಗಿದೆ.

ಹೀಗೆ ರಹಸ್ಯತ್ರಯಗಳನ್ನು ತಿಳಿದು, ರಹಸ್ಯತ್ರಯಗಳನ್ನು ಅರ್ಥಮಾಡಿಕೊಂಡು ಅನುಷ್ಠಾನ ಮಾಡುತ್ತಾ, ಧರ್ಮ, ಅರ್ಥ, ಕಾಮ, ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳನ್ನು ಸಂಪಾದಿಸಲು ಜೀವನು ಪ್ರಯತ್ನಿಸಬೇಕು. ಎಂದು ಸವಿಸ್ತಾರವಾಗಿ ವಿಶಿಷ್ಟಾದ್ವೈತಮತದಲ್ಲಿ ಹೇಳಿ ತತ್ಸಂಬಂಧವಾದ ಸಾಧನಾ ವಿವರಗಳನ್ನು ನೀಡಲಾಗಿದೆ.

ಈ ರೀತಿಯಲ್ಲಿ ವಿಶಿಷ್ಟಾದ್ವೈತ ಮತವು ಬ್ರಹ್ಮ, ಜೀವ, ಜಗತ್ತು ಎಲ್ಲವನ್ನು ಸತ್ಯ ಎಂದು ಘೋಷಿಸಿ ಭಕ್ತಿ ಮತ್ತು ಪ್ರಪತ್ತಿಗಳಿಂದ ಪರಿಪೋಷಿತವಾದ ಶರಣಾಗತಿಯೇ ಮೋಕ್ಷಕ್ಕೆ ಸಾಧನ ಎಂದು ಹೇಳಿ ಜೀವಿಯ ಉನ್ನತಿಗೆ ಮಾರ್ಗದರ್ಶನವನ್ನು ನೀಡಿರುತ್ತದೆ.

ಒಟ್ಟಿನಲ್ಲಿ ಭಕ್ತಿಪೂರ್ಣವಾದ ರಾಮಾನುಜರ ತತ್ತ್ವವು ಸಾಮಾನ್ಯ ಜನರ ಸಾಮಾಜಿಕ ಮಟ್ಟಕ್ಕೆ ನಿಲುಕುವಂತಹುದು. ಆದುದರಿಂದ ಅದು ಹೆಚ್ಚಿನ ಕಡೆಗಳಲ್ಲಿ ಜನಪ್ರಿಯವಾಯಿತು. ರಾಮಾನುಜರ ಪ್ರಭಾವವು ಉತ್ತರ ಭಾರತದಲ್ಲಿ ಪ್ರಚಲಿತವಾಗತೊಡಗಿದ ಭಕ್ತಿಮಾರ್ಗದ ಮೇಲೆ ಚೆನ್ನಾಗಿ ಆಯಿತು ರಾಮಾನುಜಾಚಾರ್ಯರು ಭಾರತೀಯ ಧಾರ್ಮಿಕ ಸಂಸ್ಕೃತಿಯ ಮೇಲೆ ಬಹಳವಾಗಿ ಪ್ರಭಾವ ಬೀರಿದ್ದಾರೆ.

---

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂಡ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಟಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ಶಂಕರಾಚಾರ್ಯ

ಶಿವಗುರು ಎಂಬಾತ ಕೇರಳದ ಕಾಲಡಿಯಲ್ಲಿ ವಾಸಿಸುತ್ತಿದ್ದ. ಆತನ ಹೆಂಡತಿ ಆರ್ಯಾಂಬೆ. ವೈಶಾಖ ಶುದ್ಧ ಪಂಚಮಿಯಂದು ಅವರಿಗೆ ಒಂದು ಗಂಡು ಮಗು ಹುಟ್ಟಿತು. ಮಗುವಿಗೆ 'ಶಂಕರ' ಎಂದು ಹೆಸರಿಟ್ಟು ಪ್ರೀತಿಯಿಂದ ಸಾಕಿದರು. ಚಿಕ್ಕಂದಿನಿಂದ ತುಂಬ ಬುದ್ಧಿವಂತನಾಗಿದ್ದ ಶಂಕರ ತಂದೆಯ ಬಳಿ ವಿದ್ಯೆ ಕಲಿಯತೊಡಗಿದ. ಮೂರನೆಯ ವಯಸ್ಸಿಗೇ ಸಂಸ್ಕೃತವನ್ನು ಚೆನ್ನಾಗಿ ಕಲಿತಿದ್ದ. ದುರದೃಷ್ಟದಿಂದ ಆವನಿಗೆ ಐದು ವರ್ಷ ತುಂಬುತ್ತಲೇ ಅವನ ತಂದೆ ಸತ್ತುಹೋದರು. ತಾಯಿ ಮಗನಿಗೆ ಉಪನಯನವನ್ನು ಮಾಡಿಸಿ, ವಿದ್ಯಾಭ್ಯಾಸಕ್ಕೆ ಗುರುಕುಲಕ್ಕೆ ಕಳುಹಿಸಿದರು, ಗುರುಗಳು ಒಮ್ಮೆ ಹೇಳಿಕೊಟ್ಟ ಕೂಡಲೇ ಶಂಕರ ಎಲ್ಲ ಪಾಠಗಳನ್ನೂ ಕಲಿತು ಬಿಡುತ್ತಿದ್ದ ಎರಡೇ ವರ್ಷಗಳಲ್ಲಿ ಗುರುಗಳಿಂದ ವೇದಗಳನ್ನು ಕಲಿತು ಪಂಡಿತನಾದನು. ಒಂದು ದಿನ ಗುರುಕುಲದ ಪದ್ಧತಿಯಂತೆ ಶಂಕರ ಭಿಕ್ಷೆ ಬೇಡಲು ಮನೆಯೊಂದರ ಮುಂದೆ ಹೋಗಿ ನಿಂತು 'ಭವತಿ ಭಿಕ್ಷಾಂದೇಹಿ' ಅಂದನು. ಮನೆಯೊಡತಿ ಕಡುಬಡವಳು. ಮನೆಯನ್ನೆಲ್ಲ ಹುಡುಕಿದರೂ ಒಂದು ನೆಲ್ಲಿಕಾಯಿಯನ್ನು ಬಿಟ್ಟು ಬೇರೇನೂ ದೊರಕಲಿಲ್ಲ. ಆವಳು ಅದನ್ನೇ ಶಂಕರನಿಗೆ ಭಿಕ್ಷೆನೀಡಿದಳು. ಬಡವಳ ಪರಿಸ್ಥಿತಿಯನ್ನು ಕಂಡು ಮರುಗಿದ ಶಂಕರ 'ಕನಕಧಾರಾಸ್ತವ'ದಿಂದ ಲಕ್ಷ್ಮಿಯನ್ನು ಪ್ರಾರ್ಥಿಸಿದನು. ಲಕ್ಷ್ಮಿ ಪ್ರತ್ಯಕ್ಷಳಾಗಿ, ವರಬೇಡುವಂತೆ ಶಂಕರನಿಗೆ ಹೇಳಲು, ಚಿನ್ನದ ನೆಲ್ಲೀಕಾಯಿ ಮಳೆಯನ್ನು ಆ ಬಡವಳ ಮನೆಯಲ್ಲಿ ಸುರಿಸಿ, ಉದ್ಧಾರ ಮಾಡುವಂತೆ ಬೇಡಿದ ಬಾಲಕ ಶಂಕರ. ಇದರಿಂದ ಶಂಕರನ ಮಹಿಮೆ ಎಲ್ಲಕಡೆ ಹರಡಿತು.

ಗುರುಗಳ ಆಶೀರ್ವಾದ ಪಡೆದು ಶಂಕರ ಕಾಲಡಿಗೆ ತಾಯಿಯನ್ನು ನೋಡಲು ಬಂದ. ದೂರದಲ್ಲಿ ವೃದ್ಧೆಯೊಬ್ಬಳು ತುಂಬಿದ ಕೊಡ ಹೊತ್ತು ಸುಡುಬಿಸಿಲಲ್ಲಿ ಹೊರಲಾರದೆ ನಡೆದುಬರುತ್ತಿರುವುದು ಕಂಡು ಬಂತು. ಆಕೆಗೆ ಸಹಾಯ ಮಾಡಲು ಶಂಕರ ಓಡಿ ಬಂದ. ಹತ್ತಿರ ಬಂದಾಗ ಆಕೆಯೇ ತನ್ನ ತಾಯಿ ಎಂದು ಗೊತ್ತಾಗಿ ಶಂಕರನ ಕಣ್ಣಲ್ಲಿ ನೀರು ತುಂಬಿತು. ಬಿಂದಿಗೆಯನ್ನೆತ್ತಿಕೊಂಡು ತಾಯಿಯೊಡನೆ ಮನೆಗೆ ಬಂದ. ದೂರದಿಂದ ನೀರು ಹೊರುವ ಕಷ್ಟ ತಾಯಿಗೆ ತಪ್ಪಲೆಂದು ಪೂರ್ಣಾ ನದಿಯನ್ನು ಪ್ರಾರ್ಥಿಸಿ ಮನೆಯ ಹತ್ತಿರವೇ ನದಿ ಹರಿಯುವಂತೆ ಮಾಡಿದ. ಶಂಕರನ ಖ್ಯಾತಿಯನ್ನು ಕೇಳಿ ಆವನನ್ನು ನೋಡಲು ಕೇರಳದ ರಾಜ ಬಂದು ತನ್ನ ಆಸ್ಥಾನ ವಿದ್ವಾಂಸನಾಗಬೇಕೆಂದು ಕೇಳಿಕೊಂಡ. ಶಂಕರ 'ನಾನಿನ್ನೂ ಬಾಲಕ ನನಗಿಂತ ವಿದ್ಯಾವಂತರಾದ ಹಿರಿಯರನ್ನು ಆ ಕೆಲಸಕ್ಕೆ ನೇಮಿಸಿಕೊಳ್ಳಿ' ಎಂದು ನಯವಾಗಿ ರಾಜನ ಬೇಡಿಕೆಯನ್ನು ತಿರಸ್ಕರಿಸಿದ. ರಾಜ ಶಂಕರನಿಗೆ ಗೌರವವನ್ನು ಸೂಚಿಸಲು ಹಣವನ್ನು ನೀಡಿದ. 'ವಟುವಾದ ನನಗೆ ಹಣದ ಅವಶ್ಯಕತೆ ಇಲ್ಲ. ಇದನ್ನು ದೀನ ದಲಿತರಿಗೆ ದಾನಮಾಡಿ' ಎಂದು ಶಂಕರ ಆದನ್ನೂ ತಿರಸ್ಕರಿಸಿದ. ಶಂಕರನಲ್ಲಿ ವಿದ್ಯೆಯೊಂದಿಗೆ ವೈರಾಗ್ಯವೂ ಮನೆಮಾಡಿರುವುದನ್ನು ರಾಜ ಮನಗಂಡ. ತನಗೆ ಸಂತಾನವಿಲ್ಲವೆಂದು ದುಃಖಿಸುತ್ತಿದ್ದ ರಾಜನಿಗೆ ಪುತ್ರಕಾಮೇಷ್ಟಿ ಯಾಗವನ್ನು ಮಾಡಿ ಮಕ್ಕಳನ್ನು ಪಡೆಯಲು ತಿಳಿಸಿ ಶಂಕರ ಆಶೀರ್ವದಿಸಿದ,




ಆತ್ಮಜ್ಞಾನಿಯೂ ವೈರಾಗ್ಯನಿಧಿಯೂ ಆದ ಶಂಕರ ಲೋಕ ಕಲ್ಯಾಣಕ್ಕಾಗಿ ತನ್ನ ಜೀವನವನ್ನು ವಿನಿಯೋಗಿಸಲು ನಿಶ್ಚಯಿಸಿದ. ಅದಕ್ಕಾಗಿ ಸನ್ಯಾಸ ದೀಕ್ಷೆ ಪಡೆಯಲು ನಿರ್ಧರಿಸಿದ. ಒಂದು ದಿನ ಶಂಕರ ಪೂರ್ಣಾನದಿಯಲ್ಲಿ ಸ್ನಾನಮಾಡುತ್ತಿರುವಾಗ ಮೊಸಳೆಯೊಂದು ಅವನ ಕಾಲು ಹಿಡಿಯಿತು. "ಅಮ್ಮಾ" ಎಂದು ಕೂಗಿದ ಶಂಕರ. ಮಗನ ದನಿಯನ್ನು ಕೇಳಿ ಓಡಿ ಬಂದಳು ಆರ್ಯಾಂಬೆ. ಶಂಕರ ನದಿಯಲ್ಲಿ ನಿಂತು "ಅಮ್ಮಾ ಮೊಸಳೆ ಕಾಲು ಹಿಡಿದಿದೆ. ಸನ್ಯಾಸ ಸ್ವೀಕರಿಸಲು ನನಗೆ ಅಪ್ಪಣೆ ಕೊಟ್ಟರೆ ನನ್ನ ಜನ್ಮ ಪಾವನವಾಗುತ್ತದೆ. ಮೊಸಳೆಯೂ ಕಾಲು ಬಿಡುತ್ತದೆ" ಎಂದನು. ಮಗ ಸನ್ಯಾಸಿಯಾಗಿಯಾದರೂ ಬದುಕಿರಲಿ ಎಂಬ ಆಸೆಯಿಂದ ಆರ್ಯಾಂಬೆ ಸನ್ಯಾಸಿಯಾಗಲು ಅನುಮತಿ ನೀಡಿದಳು. ಮೊಸಳೆ ಕಾಲು ಬಿಟ್ಟಿತು. ನದಿಯಿಂದ ಬಂದು ತಾಯಿಗೆ ನಮಸ್ಕರಿಸಿ, ಸನ್ಯಾಸ ಸ್ವೀಕರಿಸಲು ಹೊರಡುವೆನೆಂದ ಶಂಕರ.

ಆಕೆ ಕಣ್ಣಲ್ಲಿ ನೀರು ತಂದುಕೊಂಡು 'ನೀನಲ್ಲದೆ ನನಗೆ ಬೇರೆ ದಿಕ್ಕಿಲ್ಲ. ನನ್ನ ಕೊನೆಗಾಲದಲ್ಲಿ ನೀನು ನನ್ನ ಬಳಿ ಇದ್ದು, ನನ್ನ ಅಂತ್ಯ ಸಂಸ್ಕಾರವನ್ನು ನೆರವೇರಿಸಬೇಕೆಂಬುದು ನನ್ನ ಆಸೆ' ಎಂದಳು. ಶಂಕರ– "ಅಮ್ಮಾ ತಾಯಿಯೇ ದೇವರೆಂದು ವೇದ ಸಾರುತ್ತದೆ. ನಿನ್ನ ಮಾತನ್ನು ಖಂಡಿತ ನಡೆಸಿಕೊಡುತ್ತೇನೆ. ನೀನು ನೆನೆದ ಕೂಡಲೇ ನಿನ್ನಲ್ಲಿಗೆ ಬರುತ್ತೇನೆ" ಎಂದು ಹೇಳಿ ಆಕೆಯ ಅಪ್ಪಣೆ ಪಡೆದು ತನ್ನ ಎಂಟನೆಯ ವಯಸ್ಸಿನಲ್ಲಿ ಸನ್ಯಾಸಿಯಾಗಲು ಹೊರಟ. ಹಗಲು ರಾತ್ರಿಯೆನ್ನದೆ ಬೆಟ್ಟ ಗುಡ್ಡ

**ಶ್ರೀಮತಿ ಬಿ.ಎಸ್. ಸರೋಜ, ಎಂ.ಎ**

ಕಾಡು ಮೇಡುಗಳಲ್ಲಿ ನಡೆದು ನರ್ಮದಾನದೀ ತೀರದಲ್ಲಿದ್ದ ಗೋವಿಂದ ಭಗವತ್ಪಾದರ ಆಶ್ರಮವನ್ನು ತಲುಪಿದ. ಗುರುಗಳು ತಪೋಮಗ್ನರಾಗಿದ್ದರು. ಶಂಕರ ಗುರುಗಳಿಗೆ ವಂದಿಸಿದ. ಅವನನ್ನು ಪರೀಕ್ಷೆಮಾಡಲು ಗುರುಗಳು ನರ್ಮದಾನದಿ ಉಕ್ಕಿ ಹರಿಯುವಂತೆ ಮಾಡಿದರು. ನದಿಯ ನೀರು ಆಶ್ರಮಕ್ಕೆ ಬಂದಾಗ ಆಶ್ರಮವಾಸಿಗಳೆಲ್ಲ ಹೆದರಿ ಕಂಗಾಲಾದರು. ಗುರುಗಳ ಕರುಣೆ ನಮಗಿರುವಾಗ ನರ್ಮದೆ ನಮಗೆ ಏನೂ ಮಾಡಲಾರಳು. ಹೆದರದಿರಿ ಎಂದು ಅವರಿಗೆ ಧೈರ್ಯ ಹೇಳಿದ ಶಂಕರ.

ತನ್ನ ಕಮಂಡಲವನ್ನಿರಿಸಿ, "ನರ್ಮದಾಷ್ಟಕ" ವನ್ನು ಹೇಳಿ ನರ್ಮದೆಯನ್ನು ಸ್ತುತಿಸಿದ. ನರ್ಮದೆ ಕಮಂಡಲವನ್ನು ಪ್ರವೇಶಿಸಿ ಶಾಂತಳಾದಳು. ಪರೀಕ್ಷೆಯಲ್ಲಿ ಗೆದ್ದ ಶಂಕರನನ್ನು ಏಕೆ ಇಲ್ಲಿಗೆ ಬಂದೆ ಎಂದು ಗುರುಗಳು ಕೇಳಿದರು. ಶಂಕರ ತನ್ನ ಕಾಲನ್ನು ಮೊಸಳೆ ಹಿಡಿದ ವೃತ್ತಾಂತವನ್ನು ತಿಳಿಸಿ, ಆಗ ಆತುರ ಸನ್ಯಾಸವನ್ನು ತೆಗೆದುಕೊಂಡಿದ್ದೇನೆ. ಕ್ರಮಸನ್ಯಾಸ ಮತ್ತು ಜ್ಞಾನ ಸಂಪಾದನೆಗಾಗಿ ತಮ್ಮಲ್ಲಿಗೆ ಬಂದಿದ್ದೇನೆ ಎಂದ. ಗೋವಿಂದ ಭಗವತ್ಪಾದರು ಸಂತೋಷದಿಂದ ಶಂಕರನಿಗೆ ಕ್ರಮಸನ್ಯಾಸವನ್ನು ನೀಡಿ "ಇಂದಿನಿಂದ ಶಂಕರ ಭಗವತ್ಪಾದನೆಂದು ನೀನು ಜಗತ್ಪ್ರಸಿದ್ಧನಾಗು" ಎಂದು ಹರಸಿದರು. ಶಂಕರನಿಗೆ ಕಷಾಯ ವಸ್ತ್ರ, ದಂಡ, ಕಮಡಲಗಳನ್ನಿತ್ತು ಮಂತ್ರೋಪದೇಶ ನೀಡಿದರು. ಅದ್ವೈತ ತತ್ತ್ವವನ್ನು ಜಗತ್ತಿನಾದ್ಯಂತ ಪ್ರಸಿದ್ಧಗೊಳಿಸಿ, ಉಪನಿಷತ್ತು, ಬ್ರಹ್ಮಸೂತ್ರ ಭಗವದ್ಗೀತೆಗಳಿಗೆ ಭಾಷ್ಯವನ್ನು ರಚಿಸಿ ಲೋಕೋದ್ಧಾರ ಮಾಡಬೇಕೆಂದು ಹರಸಿ ಶಂಕರಾಚಾರ್ಯರನ್ನು ಬೀಳ್ಕೊಟ್ಟರು. ಗುರುಗಳಿಗೆ ವಂದಿಸಿ, ಅವರ ಅಪ್ಪಣೆಯನ್ನು ಶಿರಸಾ ಸ್ವೀಕರಿಸಿ ಶಂಕರಾಚಾರ್ಯರು ಪ್ರಸಿದ್ಧವಾದ ಕಾಶೀ ಕ್ಷೇತ್ರಕ್ಕೆ ಬಂದರು. ಗಂಗೆಯಲ್ಲಿ ಮಿಂದು ಗಂಗಾಷ್ಟಕ, ಮಣಿಕರ್ಣಿಕಾಕಷ್ಟಕಗಳನ್ನು ಪಠಿಸಿ, ವಿಶ್ವನಾಥನ ದರ್ಶನ ಪಡೆದು ಕಾಶೀ ಪಂಚಕ ಶ್ಲೋಕದಿಂದ ಸ್ತುತಿಸಿದರು.

ಕಾಶೀ ವಿದ್ಯಾಪೀಠಕ್ಕೆ ಬಂದು 'ದೇವರು ಒಬ್ಬನೇ. ಅವನನ್ನು ನಾವು ನಾನಾ ಹೆಸರಿನಿಂದ ಕರೆಯುತ್ತೇವೆ. ಬ್ರಹ್ಮವೊಂದೇ ಸತ್ಯ. ಜಗತ್ತು ಮಿಥ್ಯೆ. ಆತ್ಮ ಸಾಕ್ಷಾ

ತ್ಕಾರ ಮತ್ತು ಆನಂದಾನುಭವವೇ ಶ್ರುತಿ ಸಾರ' ಎಂದು ವಾದಿಸಿ, ಅಧ್ಯಾತ್ಮಸಾರ ವನ್ನೂ ಅದ್ವೈತದ ತತ್ತ್ವಗಳನ್ನೂ ಪ್ರಚುರ ಪಡಿಸಿದರು. ಅನೇಕ ವಿದ್ವಾಂಸ ರನ್ನು ವಾದದಲ್ಲಿ ಸೋಲಿಸಿದರು. ಅನೇಕಾನೇಕ ಶಿಷ್ಯರನ್ನು ಪಡೆದು ಕಾಶಿಯಿಂದ ಹೊರಟು ಬದರಿಗೆ ಬಂದರು. ನಾಸ್ತಿಕರಿಂದ ನಾರಾಯಣ ಕುಂಡದಲ್ಲಿ ಎಸೆಯಲ್ಪಟ್ಟಿದ್ದ ನಾರಾಯಣ ವಿಗ್ರಹವನ್ನು ಹೊರತೆಗೆದು ಮತ್ತೆ ಪ್ರತಿಷ್ಠೆಮಾಡಿ ಮಂದಿರ ರಚಿಸಿ ಪೂಜೆಗೆ ಏರ್ಪಾಟು ಮಾಡಿದರು.

ಬದರಿಯ ಪವಿತ್ರ ವಾತಾವರಣದಲ್ಲಿ ಭಗವದ್ಗೀತೆ, ಬ್ರಹ್ಮ ಸೂತ್ರ, ಉಪನಿಷತ್ತುಗಳಿಗೆ ಭಾಷ್ಯ ಬರೆದು ಗುರುಗಳ ಅಪ್ಪಣೆಯನ್ನು ಪಾಲಿಸಿದರು. ಶಿಷ್ಯರಿಗೆ ಭಾಷ್ಯ ಪಾಠ ನಡೆಸುತ್ತಿದ್ದರು. ಭಾಷ್ಯವನ್ನೋದಿ ಸಂತೋಷಪಟ್ಟು ಬ್ರಹ್ಮ ಸೂತ್ರ ಕರ್ತೃವಾದ ವೇದವ್ಯಾಸರು ಬ್ರಾಹ್ಮಣ ರೂಪದಿಂದ ಶಂಕರರಿಗೆ ದರ್ಶನ ನೀಡಿ, ಹರಸಿದರು. ತಮ್ಮ ಹದಿನಾರನೆಯ ವಯಸ್ಸಿನಲ್ಲೇ ಇಂತಹ ಮಹತ್ವದ ಕೆಲಸವನ್ನು ಶಂಕರಾಚಾರ್ಯರು ಮಾಡಿ ಮುಗಿಸಿದ್ದರು. ಬದರಿಯಿಂದ ಹೊರಟು, ಕೇದಾರವನ್ನು ಸಂದರ್ಶಿಸಿ ಮತ್ತೆ ಕಾಶಿಗೆ ಬಂದು ಅದ್ವೈತ ಧರ್ಮ ಪ್ರಚಾರ ಮಾಡತೊಡಗಿದರು. ಆದಿತ್ಯ, ಅಂಬಿಕ, ಗಣಪ, ವಿಷ್ಣು, ಮಹೇಶ್ವರ — ಈ ಐದು ಪ್ರಮುಖ ದೇವತೆಗಳ ಪೂಜೆಯನ್ನು ರೂಪಿಸಿ, 'ಪಂಚಾಯತನ ಪೂಜೆ' ಎಂದು ಕರೆದರು. ಶಿಷ್ಯರಿಗೂ ಜನರಿಗೂ ಸನ್ಮಾರ್ಗ ದರ್ಶನಮಾಡುವಲ್ಲಿ, ಅವರಿಗೆ ನಂಬಿಕೆ ಬರಿಸಲು ಅನೇಕ ಪವಾಡಗಳನ್ನು ಮೆರೆದರು. ಕುಷ್ಠರೋಗಿಯೊಬ್ಬ ತನ್ನ ಪ್ರಾಣ ತ್ಯಾಗಮಾಡ ಹೊರಟಾಗ ಅವನಿಗೆ "ಏಕ ಶ್ಲೋಕಿ"ಯನ್ನುಪದೇಶಿಸಿ, ಅವನ ತಲೆಯ ಮೇಲೆ ತಮ್ಮ ವರದ ಹಸ್ತವನ್ನಿಟ್ಟು ರೋಗನಿವಾರಣೆ ಮಾಡಿದರು. ಗಂಗೆಯ ತೀರದಲ್ಲಿ ಮುದುಕನೊಬ್ಬ ಕುಳಿತು "ಡುಕೃಜ್ಕರಣೇ" ಎಂದು ವ್ಯಾಕರಣವನ್ನು ಕಂಠಪಾಠ ಮಾಡುತ್ತಿದ್ದುದನ್ನು ಕಂಡ ಶಂಕರರು —

"ಭಜಗೋವಿಂದಂ ಭಜಗೋವಿಂದಂ
ಗೋವಿಂದಂ ಭಜ ಮೂಢಮತೇ
ಸಂಪ್ರಾಪ್ತೇ ಸನ್ನಿಹಿತೇ ಕಾಲೇ
ನಹಿ ನಹಿ ರಕ್ಷತಿ ಡುಕೃಜ್ಕರಣೇ"

ಎಂದು ಪ್ರಾರಂಭಿಸಿ, ಕಾಲಪುರುಷ ಬಂದು ಕರೆದಾಗ ವ್ಯಾಕರಣ ನಿನ್ನನ್ನು ರಕ್ಷಿಸುವುದಿಲ್ಲ. ಈ ಇಳಿವಯಸ್ಸಿನಲ್ಲಿ ನಿನಗೆ ವ್ಯಾಕರಣದ ವ್ಯಾಮೋಹವೇಕೆ? ಗೋವಿಂದನನ್ನು ಭಜಿಸು ಎಂದು "ಭಜಗೋವಿಂದ" ಸ್ತೋತ್ರದ ಮೂಲಕ ಉಪದೇಶಿಸಿದರು. ಕುಮಾರಿಲಭಟ್ಟರ ಶಿಷ್ಯರಾದ ಮಂಡನ ಮಿಶ್ರರನ್ನು ವಾದದಲ್ಲಿ ಸೋಲಿಸಿ, ಸುರೇಶ್ವರಾಚಾರ್ಯರೆಂಬ ಹೆಸರನ್ನಿಟ್ಟು ಅವರಿಗೆ ಸನ್ಯಾಸ ದೀಕ್ಷೆ ಕೊಟ್ಟರು. ಶಂಕರರು ಬರೆದ ಭಾಷ್ಯಗಳಿಗೆ ಇವರು ವಾರ್ತಿಕ (ಟೀಕೆ) ಬರೆದಿದ್ದಾರೆ. ಪರಕಾಯ ಪ್ರವೇಶ ಮಾಡಿ ಮಂಡನ ಮಿಶ್ರರ ಹೆಂಡತಿಯಾದ ಭಾರತಿಯ ಸಂಶಯ ಪರಿಹರಿಸಿದರು. ಆಕೆ ಶಂಕರರ ಅಪ್ಪಣೆ ಪಡೆದು ಭೌತಿಕ ದೇಹವನ್ನು ತ್ಯಜಿಸಿ, ಶಂಕರ ಮಠಗಳಿರುವೆಡೆಯಲ್ಲೆಲ್ಲ ತನ್ನ ಚೇತನವನ್ನಿರಿಸಿ, ಪೂಜ್ಯಳಾದಳು.

ನಂತರ ಶ್ರೀಶೈಲ, ಗೋಕರ್ಣಗಳಲ್ಲಿ ಶೈವ ಮತಾವಲಂಬಿಗಳನ್ನು ವಾದದಲ್ಲಿ ಸೋಲಿಸಿ, ಕೊಲ್ಲೂರಿನಲ್ಲಿ ಜಗದಾಂಬೆಯನ್ನು ಸ್ತುತಿಸಿ, "ಋಷ್ಯಶೃಂಗಪುರ"ವನ್ನು ತಲುಪಿದರು, ಅಲ್ಲಿ ಶ್ರೀಚಕ್ರವನ್ನು ಸ್ಥಾಪಿಸಿ, ಕಾಲಡಿಗೆ ಬಂದರು. ಅಲ್ಲಿ ಅವರ ತಾಯಿ ಮರಣ ಶಯ್ಯೆಯಲ್ಲಿದ್ದರು. ತಾಯಿ ಶ್ರೀಕೃಷ್ಣನ ದರ್ಶನ ಪಡೆಯ ಬೇಕೆಂದು ಬಯಸಲು, ಶಂಕರರು 'ಕೃಷ್ಣಾಷ್ಟಕ'ವನ್ನು ಹಾಡಿ ತಾಯಿಗೆ ಕೃಷ್ಣನ ಸಾಕ್ಷಾತ್ಕಾರ ಮಾಡಿಸಿದರು. ಕೃಷ್ಣನನ್ನು ನೋಡುತ್ತ ಸಂತೋಷದಿಂದ ತಾಯಿ ಪ್ರಾಣ ಬಿಡಲು, ಅಗ್ನಿಯನ್ನು ಧ್ಯಾನಿಸಿ, ತಾಯಿಯ ದೇಹವನ್ನು ಮುಟ್ಟಲು, ಅಗ್ನಿ ಪ್ರಜ್ವಲಿಸಿ ಶವಸಂಸ್ಕಾರವಾಯಿತು.

ಅಲ್ಲಿಂದ ಶಿವಕಂಚಿಗೆ ತೆರಳಿ, ಏಕಾಂಬರ ನಾಥನನ್ನೂ ಕಾಮಾಕ್ಷಿಯನ್ನೂ ದರ್ಶಿಸಿ, ಅಷ್ಟಲಕ್ಷ್ಮಿಯರನ್ನು ಪ್ರತಿಷ್ಠಾಪಿಸಿದರು. ಹೀಗೆ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಪ್ರಯಾಣಮಾಡಿ, ಅದ್ವೈತ ಮತವನ್ನು ಸ್ಥಾಪಿಸಿದರು. ಕಾಶ್ಮೀರದ ಸರ್ವಜ್ಞ ಪೀಠಾರೋಹಣ ಮಾಡಿದರು. ತಮ್ಮ ಶಿಷ್ಯರಾದ ಸುರೇಶ್ವರಾಚಾರ್ಯರಿಗೆ ಶೃಂಗೇರಿ ಪೀಠವನ್ನೂ, ಹಸ್ತಾಮಲಕಾಚಾರ್ಯರಿಗೆ ಪುರೀ ಪೀಠವನ್ನೂ, ಪದ್ಮಪಾದರಿಗೆ ದ್ವಾರಕಾ ಪೀಠವನ್ನೂ, ತ್ರೋಟಕಾಚಾರ್ಯರಿಗೆ ಬದರೀ ಪೀಠವನ್ನೂ ಸ್ಥಾಪಿಸಬೇಕೆಂದು ತಿಳಿಸಿ ಅವರನ್ನು ಮಠಾಧಿಪತಿಗಳನ್ನಾಗಿ ಮಾಡಿದರು.

ಇಷ್ಟೆಲ್ಲ ಕೆಲಸಗಳನ್ನೂ ತಮ್ಮ ಮುವ್ವತ್ತೆರಡು ವರ್ಷಗಳ ಅಲ್ಪ ಜೀವಿತದಲ್ಲಿ ಮಾಡಿ ಮುಗಿಸಿ ವೈಶಾಖ ಬಹುಳ ದಶಮಿಯಂದು ಆಚಾರ್ಯರು ಗುಹಾಪ್ರವೇಶ ಮಾಡಿ ತಮ್ಮ ಐಹಿಕ ಜೀವನಕ್ಕೆ ಇತಿಶ್ರೀ ಹಾಡಿದರು. ನಾವು ಎಷ್ಟು ದಿನ ಬಾಳುತ್ತೇವೆ ಅನ್ನುವುದು ಮುಖ್ಯವಲ್ಲ. ಬದುಕಿದಷ್ಟು ದಿನವನ್ನು ಹೇಗೆ ಸಾರ್ಥಕವಾಗಿ, ಪರೋಪಕಾರ ಮಾಡುತ್ತ ಬಾಳಿ ಮಹಾತ್ಮರೆನಿಸುತ್ತೇವೆ ಎನ್ನುವುದು ಮುಖ್ಯ ಎಂಬುದನ್ನು ಆಚಾರ್ಯರು ತಮ್ಮ ಬಾಳಿನ ಮೂಲಕ ಜಗತ್ತಿಗೆ ಸಾರಿದ್ದಾರೆ. ★

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ.

(12 ನೇ ಪುಟದಿಂದ)

ನಗರದ ಉಚ್ಛ್ರಾಯ ಕಾಲದಲ್ಲಿದ್ದವರು. ವ್ಯಾಸರಾಯರ ಶಿಷ್ಯರು. ಇವರು ಕೀರ್ತನೆಗಳಿಗೆ ಸಂಗೀತವನ್ನು ವಿವಿಧ ರೀತಿಯಲ್ಲಿ ಅಳವಡಿಸಿ ಅನೇಕ ಜಾನಪದ ಮಟ್ಟುಗಳಿಗೆ ಶಾಸ್ತ್ರೀಯ ರಾಗಗಳನ್ನು ಕೊಟ್ಟು ಒಂದು ಹೊಸ ಚೈತನ್ಯವನ್ನುಂಟು ಮಾಡಿದರು. ಇವರು ಜನಸಾಮಾನ್ಯದಲ್ಲಿ ಬಳಕೆಯಲ್ಲಿರುವ ಲಾವಣಿ, ಬುಡುಬುಡಿಕೆ, ಸುವ್ವಾಲೆ, ಜೋಗಿಪದ, ಮೊದಲಾದುವುಗಳಿಂದ ಹಿಡಿದು ಶಾಸ್ತ್ರೀಯ ರಾಗವಿನ್ಯಾಸಗಳವರೆಗೆ ಕೀರ್ತನೆಗಳನ್ನು ರಚಿಸಿದ್ದಾರೆ. ಅವನ್ನು ಛತ್ತೀಸ್ 36 ರಾಗಗಳಲ್ಲಿ ಹಾಡಿದ್ದಾರೆ. ಈ ಎಲ್ಲ ರಾಗಗಳಲ್ಲಿಯೂ ಪ್ರಯೋಗಗಳನ್ನು ನಡೆಸಿದ್ದಾರೆ. ಇವರ ಕೃತಿಗಳಲ್ಲಿ ಬಹುಭಾಗ ಉಗಾಭೋಗಗಳು. ಪುರಂದರದಾಸರ ಸುಳಾದಿಗಳು 14000 ಎಂದು ಪ್ರತೀತಿ. ಕೆಲವು ಮಾತ್ರ ಉಪಲಬ್ಧವಾಗಿವೆ. ಇವರು 36,000 ವೃತ್ತನಾಮಗಳನ್ನು 4,25,000 ಕೀರ್ತನೆಗಳನ್ನು ರಚಿಸಿರುವಂತೆ ಪ್ರತೀತಿ. ಇವುಗಳಲ್ಲಿ ಬಹುಸ್ವಲ್ಪ ಭಾಗವಮಾತ್ರ ಸಿಕ್ಕಿವೆ.

ಹರಿದಾಸರಲ್ಲಿ ಮುಂದೆ ವಿಚಾರಾರ್ಹರಾದವರು ಕನಕದಾಸರು. ಇವರು ಕಾಗಿನೆಲೆಯ ಆದಿಕೇಶವನ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ. ದೇವರ ನಾಮಗಳನ್ನು ಸ್ತೋತ್ರಗಳನ್ನು ರಚಿಸಿದ್ದಾರೆ. ಇವರು ರಚಿಸಿರುವ ಪದಗಳು 289.

ಇವರುಗಳನ್ನು ಸರಿಸಿ ಇವರ ಸಮಕಾಲದಲ್ಲಿಯೂ ಅವರಿಂದ ಮುಂದಕ್ಕೂ ಅಸಂಖ್ಯಾತ ಹರಿದಾಸರು ಇಂತಹ ಸಾಹಿತ್ಯವನ್ನು ವಿಪುಲವಾಗಿ ರಚಿಸಿದ್ದಾರೆ. ಇವರೆಲ್ಲ ಅನುಭಾವಿಗಳು. ವಿಶ್ವಕುಟುಂಬಿಗಳು. ವಿಶ್ವಪ್ರೇಮಿಗಳು. ಪರಮಾತ್ಮನ ಕೃಪಾಪಾತ್ರರು. ದಾಸಸಾಹಿತ್ಯವು ಭಕ್ತಿಸಾಹಿತ್ಯದಲ್ಲಿ ಒಂದು ಪ್ರಧಾನಸ್ಥಾನವನ್ನು ಪಡೆದಿರುವುದಲ್ಲದೆ ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಪ್ರಧಾನ ಪಾತ್ರವನ್ನು ವಹಿಸಿದೆ. ದಾಸರು ಜನರ ನಡೆನುಡಿಗಳಿಗೆ ಪ್ರಾಶಸ್ತ್ಯವನ್ನು ಕೊಟ್ಟು ಅವರ ಸಂಸ್ಕೃತಿ ಮೇಲ್ಮಟ್ಟಕ್ಕೆ ಏರುವಂತೆ ಮಾಡಿದ್ದಾರೆ. ಜಾತಿ ಕುಲಗಳ ಭೇದವಿಲ್ಲದೆ ಎಲ್ಲರೂ ಸಮವೆಂಬ ಭಾವನೆಯನ್ನು ಜನರಲ್ಲಿ ಮೂಡಿಸಿ ದಲಿತ ಕುಲದವರನ್ನು ಉದ್ಧಾರಮಾಡಿದ್ದಾರೆ. ದಾಸಸಾಹಿತ್ಯವು ಮಧ್ವದರ್ಶನದ ಮೂಲ ತತ್ತ್ವಗಳನ್ನು ಮೇಲೆ ತಿಳಿಸಿರುವ ಸಂಸ್ಕೃತ ಸಿದ್ಧಾಂತ ಗ್ರಂಥಗಳಿಗಿಂತ ಹೆಚ್ಚುವ್ಯಾಪಕವಾಗಿ ಜನರಲ್ಲಿ ಬೇರೂರುವಂತೆ ಮಾಡಿವೆ. ಮುಂದೆ ಮಧ್ವ ಮತಗ್ರಂಥಗಳು ನಾನಾರೀತಿಯಲ್ಲಿ ಬೆಳೆದರೂ ಅವುಗಳಿಗೆ ಭದ್ರತಳಹದಿಯಾದದ್ದು ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ. ಆದುದರಿಂದ ಆ ಕಾಲವನ್ನು ದ್ವೈತ ದರ್ಶನದ ಮಹೌನ್ನತ್ಯ ಕಾಲವೆಂದು ಕರೆಯಬಹುದು. ★

# ಕಿಶೋರ ಜಗತ್



# ಚಕ್ರವರ್ತಿ ದಿಲೀಪ

ಸೂರ್ಯವಂಶದ ಶ್ರೇಷ್ಠ ಚಕ್ರವರ್ತಿಗಳಲ್ಲಿ ದಿಲೀಪನೂ ಒಬ್ಬ. ಸೂರ್ಯವಂಶದ ರಾಜರು ಉತ್ತಮ ರೀತಿಯಲ್ಲಿ ಜೀವನ ನಡೆಸುತ್ತಿದ್ದರು. ಮಹಾಪರಾಕ್ರಮಿಗಳಾದ ಇವರು ದೇವತೆಗಳಿಗೂ ಸಹಾಯಕರಾಗಿದ್ದರು. ಲೋಕದ ಹಿತಕ್ಕಾಗಿ ಯಾಗ–ಯಜ್ಞಾದಿಗಳನ್ನು ಆಚರಿಸುತ್ತಿದ್ದರು.

ದಿಲೀಪನು ರೂಪದಲ್ಲಿ. ಗುಣದಲ್ಲಿ ಎಲ್ಲರನ್ನೂ ಮೀರಿಸಿದ್ದನು. ವಿಶಾಲವಾದ ಎದೆ, ಬಲಿಷ್ಠವಾದ ಬಾಹುಗಳು. ಚಿಕ್ಕವಯಸ್ಸಿನಲ್ಲಿಯೇ ವಶಿಷ್ಠರಿಂದ ಎಲ್ಲಾ ವಿದ್ಯೆಗಳನ್ನೂ ಕಲಿತು ಮೇಧಾವಿಯೆನಿಸಿದ್ದನು. ಪ್ರಜೆಗಳನ್ನು ಬಹಳ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದನು. ದಿಲೀಪನ ಪತ್ನಿ ಸುದಕ್ಷಿಣಾದೇವಿ. ಮಗಧ ವಂಶದವಳು. ಈಕೆ ಎಷ್ಟು ಸುಂದರಿಯಾಗಿದ್ದಳೋ ಅಷ್ಟೇ ಒಳ್ಳೆಯವಳಾಗಿದ್ದಳು.

ದಿಲೀಪ ಮಹಾರಾಜನಿಗೆ ಬೇಕಾದ ಹಾಗೆ ಸುಖಸಂಪತ್ತುಗಳಿದ್ದರೂ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ತಮ್ಮ ವಂಶವನ್ನು ಬೆಳೆಸುವ ಮಕ್ಕಳು ಯಾರೂ ಇಲ್ಲವಲ್ಲಾ ಎಂಬುದೇ ಈ ದಂಪತಿಗಳಿಗೆ ಚಿಂತೆಯಾಗಿತ್ತು. ವಶಿಷ್ಠರನ್ನು ವಿಚಾರಿಸಿ ಪರಿಹಾರ ಪಡೆಯಲು ಅವರು ವಶಿಷ್ಠರ ಆಶ್ರಮಕ್ಕೆ ಹೊರಟರು.

ವಶಿಷ್ಠರು ಇಬ್ಬರನ್ನೂ ಆದರಿಂದ ಬರಮಾಡಿಕೊಂಡು ಸತ್ಕರಿಸಿ ಕುಳಿತುಕೊಳ್ಳಲು ಹೇಳಿದರು. ಇಬ್ಬರೂ ವಶಿಷ್ಠರಿಗೂ ಅವರ ಪತ್ನಿ ಅರುಂಧತಿಗೂ ನಮಸ್ಕರಿಸಿ ಕೈಜೋಡಿಸಿ ನಿಂತರು.

ದಿಲೀಪನು, "ಗುರುವರ್ಯರೇ, ರಾಜ್ಯವು ತುಂಬಾ ಸುಭಿಕ್ಷವಾಗಿದೆ. ಪ್ರಜೆಗಳು ಸಂತಸದಿಂದ ತೃಪ್ತರಾಗಿದ್ದಾರೆ. ಆದರೆ ನನಗೂ ನನ್ನ ಮಡದಿಗೂ ಮನಶ್ಶಾಂತಿಯೇ ಇಲ್ಲ. ನನ್ನ ನಂತರ ಈ ರಾಜ್ಯವನ್ನು ಆಳಿ ಪ್ರಜೆಗಳನ್ನು ಸಂರಕ್ಷಿಸಲು ಪುತ್ರನಿಲ್ಲ. ನಿಮ್ಮ ಅನುಗ್ರಹ ಬೇಕು" ಎಂದು ಪ್ರಾರ್ಥಿಸಿದನು.

ವಶಿಷ್ಠರು ಕ್ಷಣ ಯೋಚಿಸಿ ಕಾಮಧೇನುವಿನ ಮಗಳಾದ ನಂದಿಯನ್ನು ಪೂಜಿಸಿದಲ್ಲಿ ಅವನ ಅಪೇಕ್ಷೆ ಈಡೇರುವುದೆಂದು ಹೇಳಿದರು.

ದಿಲೀಪನು ಉತ್ಸಾಹಿತನಾಗಿ "ನಂದಿನಿ ಗೋಮಾತೆ ಎಲ್ಲಿದ್ದಾಳೆ. ಇದಕ್ಕೆ ತಾವೇ ದಾರಿ ತೋರಬೇಕು" ಎಂದು ವಿನಂತಿಸಿಕೊಂಡ. "ಕಾಮಧೇನುವಿನ ಮಗಳು ನಂದಿನಿ ಈಗ ಪಾತಾಳ ಲೋಕದಲ್ಲಿದ್ದಾಳೆ. ವರುಣನು ಅಲ್ಲಿ ಒಂದು ಯಾಗ ನಡೆಸುತ್ತಿರುವನು. ಅದಕ್ಕೆ ಬೇಕಾಗುವ ಹಾಲು, ಮೊಸರು, ತುಪ್ಪ ಮುಂತಾದುವುಗಳಿಗಾಗಿ ಅವಳನ್ನು ಕರೆದೊಯ್ದಿರುವನು. ಯಾಗ ಮುಗಿಸಿ ಅವಳು ಇಲ್ಲಿಗೆ ಹಿಂತಿರುಗಬಹುದು. ಅವಳು ಬರುವವರೆಗೂ ಕಾದಿದ್ದು ಬಂದ ನಂತರ ಅವಳನ್ನು ನಿತ್ಯವೂ ನೀನು, ನಿನ್ನ ಪತ್ನಿ ಇಬ್ಬರೂ ಸೇವೆ ಮಾಡಿ. ಪುತ್ರನು ಜನಿಸುವನು. ವ್ಯಥೆ ಪಡಬೇಡಿ" ಎಂದು ವಶಿಷ್ಠರು ನುಡಿದರು.

ಅಷ್ಟರಲ್ಲಿ ನಂದಿನೀ ದೂರದಿಂದ ಬರುತ್ತಿರುವುದು ಕಾಣಿಸಿತು. ಎಳೆಯ ಚಿಗುರಿನಂತೆ ನಯವಾದ ಕಾವಿಬಣ್ಣದ ಮೈಯಲ್ಲಿ ಬಿಳಿಯ ರೋಮಗಳಿಂದ ಕೂಡಿದ್ದ. ಆ ನಂದಿನಿ ಧೇನುವಿನ ಸೇವೆ ಮಾಡುವ ವ್ರತದ ಕ್ರಮವನ್ನು ವಶಿಷ್ಠರುಉ ಪದೇಶಿಸಿದರು.

"ಈ ಆಶ್ರಮದಲ್ಲಿ ಮುನಿಗಳಂತೆ ಗೆಡ್ಡೆಗೆಣಸುಗಳನ್ನು ತಿಂದುಕೊಂಡು ಈ ಗೋವಿನ ಸೇವೆಯನ್ನು ಮಾಡು. ಅದು ನಿಂತಲ್ಲಿ ನಿಂತು, ಹೋದಲ್ಲಿ ಹೋಗಿ, ನೀರು ಕುಡಿದಲ್ಲಿ ನೀನೂ ನೀರು ಕುಡಿದು, ಮಲಗಿದಲ್ಲಿ ಮಲಗು, ನಿನ್ನ ಪತ್ನಿ ಕೂಡಾ ನಂದಿನಿಯನ್ನು ಗಂಧ ಪುಷ್ಪಗಳಿಂದ ಅರ್ಚಿಸಿ ಮೇಯಲು ಬಿಡಲಿ, ಸಂಜೆ ಅದು ಬಂದೊಡನೆ ಅರ್ಚಿಸಿ ಆದರಿಸಲಿ. ಆದರ ಅನುಗ್ರಹ ಆಗುವವರೆಗೂ ಆದರ ಸೇವೆ ಮಾಡು. ಸದ್ಗುಣಿಯೂ, ಪ್ರಜಾರಕ್ಷಕನೂ ಆದ ಮಗನು ಜನಿಸಲಿ" ಎಂದರು.

ಬೆಳಗಾದ ಕೂಡಲೇ ಸುದಕ್ಷಿಣಾದೇವಿ ಸುವಾಸನೆಯಿಂದ ಕೂಡಿದ ಹೂಗಳನ್ನು ತಂದು ನಂದಿನಿಯನ್ನು ತಂದು ಪೂಜಿಸಿದಳು. ದಿಲೀಪನು ಕರುವಿಗೆ ಹಾಲು ಕುಡಿಸಿ, ಅದನ್ನು ಕಟ್ಟಿದನು. ನಂತರ ನಂದಿನಿಯನ್ನು ಮೇಯಲು ಬಿಟ್ಟು ತಾನು ಅದರ ರಕ್ಷಣೆಗೆ ಹಿಂದೆಯೇ ಹೊರಟನು. ತಾನು ಮಹಾರಾಜನಾದರೂ ಹಸುವನ್ನು ಮೇಯಿಸುವುದು ಕೀಳೆನಿಸಲಿಲ್ಲ. ಒಳ್ಳೆಯ ರುಚಿಕರವಾದ ಹುಲ್ಲನ್ನು ಆರಿಸಿ ಅದರ ಬಾಯಿಗೆ ಕೊಟ್ಟನು. ಅದರ ಮೈಮೇಲೆ ಕುಳಿತು ತೊಂದರೆ ಕೊಡುವ ನೊಣ ಹಾಗೂ ಇತರ ಕೀಟಗಳನ್ನು ಓಡಿಸಿದನು. ಹಸು ತನ್ನ ಮನ ಬಂದ ಕಡೆಗೆ ಹೊರಟಿತು. ದಿಲೀಪನೂ ಅದರ ಹಿಂದೆಯೇ ಹೊರಟ. ಅದು ನಿಂತಲ್ಲೇ ನಿಂತ. ಮಲಗಿದರೆ ಅದರ ಕಾವಲಿಗೆ ಅಲ್ಲೇ ಕುಳಿತ. ನೀರು ಕುಡಿದರೆ ತಾನೂ ಕುಡಿದ. ಹೀಗೆ ನಂದಿನಿಯನ್ನು ಅದರ ನೆರಳಿನಂತೆ ಅನುಸರಿಸಿದನು. ಹಸುವಿಗೆ ದುಷ್ಟ ಮೃಗಗಳಿಂದ ವಿಪತ್ತು ಸಂಭವಿಸಬಹುದೆಂದು ಬಿಲ್ಲು ಬಾಣಗಳೊಂದಿಗೆ ಸಿದ್ಧನಾಗಿಯೇ

**ಶ್ರೀ ಆರ್. ಅನಂತನಾರಾಯಣ**

ಇದ್ದ. ಕತ್ತಲಾಗುತ್ತಿರುವಂತೆ ನಂದಿನಿಯನ್ನು ಸುರಕ್ಷಿತವಾಗಿ ಆಶ್ರಮಕ್ಕೆ ಕರೆತಂದನು. ಮಹಾರಾಣಿಯು ನಂದಿನಿಗೆ ಕುಂಕುಮ ಅಕ್ಷತೆಗಳನ್ನಿಟ್ಟು ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಕರುವು ಹಾಲು ಕುಡಿದನಂತರ ಅದಕ್ಕೆ ಮೇವು ನೀಡಿ, ನಂದಾ ದೀಪ ಬೆಳಗಿಸಿದಳು. ಅದು ಮಲಗಿದ ಮೇಲೆ ರಾಜ ರಾಣಿಯರಿಬ್ಬರೂ ಅದರ ಬಳಿಯೇ ಮಲಗಿದರು.

ಹೀಗೆ ಇಪ್ಪತ್ತೆರಡು ದಿನ ದಿಲೀಪನೂ ಸುದಕ್ಷಿಣೆಯೂ ಹಗಲು ಇರುಳೆನ್ನದೆ ನಂದಿನಿಯ ಸೇವೆಯ ವ್ರತವನ್ನು ನಡೆಸಿದರು.

ಇಪ್ಪತ್ತಮೂರನೆಯ ದಿನ ನಂದಿನಿಯ ಹಿಂದೆಯೇ ರಾಜನು ಹೊರಟನು. ಆ ದಿನ ನಂದಿನಿಯು ಹೊಸದೊಂದು ದಾರಿಯಲ್ಲಿ ಕಾಡಿಗೆ ಹೊರಟಿತು. ರಾಜನು ಆ ಕಾಡಿನ ಪ್ರಕೃತಿ ಸೌಂದರ್ಯವನ್ನು ನೋಡುತ್ತಾ ನಡೆಯುತ್ತಿದ್ದ. ಸ್ವಲ್ಪ ದೂರ ಹೋದ ಮೇಲೆ "ಅಂಬಾ ಅಂಬಾ" ಎಂದು ನಂದಿನಿಯ ಅಳು ಕೇಳಿಸುತ್ತದೆ. ರಾಜ ತಿರುಗಿ ನೋಡಿದಾಗ ಒಂದು ಭಯಂಕರವಾದ ಸಿಂಹ ನಂದಿನಿಯ ಮೇಲೆ ಹಾರಿ ಕುಳಿತಿದೆ. ಒಂದು ಕ್ಷಣ ರಾಜನು ಬೆರಗಾದನು. ಸಾಧುವಾದ ನಂದಿನಿಯನ್ನು ಕೊಲ್ಲುವ ಸಿಂಹವನ್ನು ಕಂಡು ಅವನಿಗೆ ಬಹಳ ಕೋಪ ಬಂತು. ಎಡಗೈಯಲ್ಲಿ ಬಿಲ್ಲು ಹಿಡಿದು ಬಾಣಕ್ಕಾಗಿ ಬತ್ತಳಿಕೆಗೆ ತನ್ನ ಬಲಗೈ ಎತ್ತಿದನು. ಆಶ್ಚರ್ಯ! ಬತ್ತಳಿಕೆಗೆ ಇಟ್ಟ ಬಲಗೈಯನ್ನು ಅವನಿಂದ ಅಲುಗಾಡಿಸಲೇ ಆಗಲಿಲ್ಲ. ಏನು ಮಾಡುವುದೆಂದು ಯೋಚಿಸುವಷ್ಟರಲ್ಲೇ ಮತ್ತೂ ಆಶ್ಚರ್ಯವಾಗುವಂತೆ ಆ ಸಿಂಹವು ಅವನೊಡನೆ ಮನುಷ್ಯರಂತೆ ಮಾತನಾಡಿತು.

"ಎಲೈ ರಾಜನೇ ನಿನ್ನ ಶ್ರಮವನ್ನು ಸಾಕುಮಾಡು. ನಿನ್ನ ಯಾವ ಸಾಹಸವೂ ನನ್ನ ಮುಂದೆ ನಡೆಯದು. ನೀನು ಒಂದು ಬಾಣವನ್ನೂ ನನ್ನ ಮೇಲೆ ಪ್ರಯೋಗಿಸಲು ಸಾಧ್ಯವಿಲ್ಲ" ಎಂದಿತು.

"ಅಯ್ಯಾ ಮೃಗರಾಜ ಮಾನವರಂತೆ ಮಾತನಾಡುತ್ತಿರುವ ನೀನು ಯಾರು?" ಎಂದು ದಿಲೀಪನು ಕೇಳಿದನು.

ಆಗ ಸಿಂಹವು, "ನಾನು ಶಿವನ ಸೇವಕನಾದ ಕುಂಭೋದರ. ಇಲ್ಲಿ ಕಾಣುತ್ತಿರುವ ಈ ದೇವದಾರು ಮರವನ್ನು ಪಾರ್ವತಿಯು ನೀರೆರೆದು ಬೆಳೆಸಿದ್ದಾಳೆ. ಇದರ ಮೇಲೆ ತನ್ನ ಮಗನಾದ ಷಣ್ಮುಖನಷ್ಟೇ ಪ್ರೀತಿ ಇಟ್ಟಿದ್ದಾಳೆ. ಶಿವನಿಗೂ ಅದರ ಮೇಲೆ ಅಷ್ಟೇ ಪ್ರೀತಿ ಯಿದೆ. ಒಂದು ದಿನ ಕಾಡಾನೆಯು ಈ ದೇವದಾರು ಮರಕ್ಕೆ ತನ್ನ ಕೆನ್ನೆಯನ್ನು ಉಜ್ಜಿದಾಗ ಅದರ ತೊಗಟೆ ಕಿತ್ತು ಬಂದು ರಸ ಸೋರತೊಡಗಿತು. ಇದರಿಂದ ಪಾರ್ವತಿಗೆ ಬಹಳ ವ್ಯಥೆಯಾಯಿತು. ಅಂದಿನಿಂದ ಶಿವನು ನನ್ನನ್ನು ಸಿಂಹವನ್ನಾಗಿ ಮಾಡಿ ಕಾಡಾನೆಗಳನ್ನು ಹೆದರಿಸಲು ನೇಮಿಸಿದ್ದಾನೆ. ಈ ಪ್ರದೇಶಕ್ಕೆ ಬರುವ ಪ್ರಾಣಿಗಳನ್ನು ಕೊಂದು ತಿನ್ನುವಂತೆಯೂ ಆಜ್ಞೆ ಮಾಡಿದ್ದಾನೆ. ನನಗೀಗ ಊಟದ ಸಮಯ. ವೇಳೆಗೆ ಸರಿಯಾಗಿ ಈ ಹಸು ಇಲ್ಲಿಗೆ ಬಂದಿದೆ. ನೀನು ಹೆದರದೆ ಆಶ್ರಮಕ್ಕೆ ಹಿಂತಿರುಗು. ಹಸುವನ್ನು ಬಿಟ್ಟು ಬಂದಿರುವುದಕ್ಕೆ ಗುರುಗಳಿಗೆ ಕೋಪವೇನೂ ಬರುವುದಿಲ್ಲ. ನನಗೆ ಶಿವನ ವರ ಇದೆ ಎಂದು ಗುರುಗಳಿಗೆ ತಿಳಿಯುತ್ತದೆ. ಆಯುಧದ ಸಹಾಯದಿಂದ ಯಾವುದನ್ನು ಕಾಪಾಡಲು ಸಾಧ್ಯವಿಲ್ಲವೋ ಅದನ್ನು ಕಾಪಾಡದೆ ಇದ್ದುದರಿಂದ ನಿನಗೆ ಅಪಕೀರ್ತಿ ಬಾರದು" ಎಂದಿತು.

ದಿಲೀಪನಿಗೆ ಸಿಂಹದ ಮುಂದೆ ತಾನ ಸೋತೆ ಎಂದು ನಾಚಿಕೆಯಾಯಿತು ಆದರೂ ಧೃತಿಗೆಡದೆ, "ಮೃಗರಾಜನೇ, ನಾನು ಗುರುವಿಗೆ ವಿಧೇಯನು. ಯಜ್ಞದಲ್ಲಿ ತೊಡಗಿರುವ ಸಂಪತ್ತಿರುವ ಈ ಗೋವನ್ನು ರಕ್ಷಿಸುವುದು ನನ್ನ ಕರ್ತವ್ಯ. ಅದನ್ನು ಬಿಟ್ಟು ಬಿಡು" ಎಂದು ಬೇಡಿದನು.

( 36ನೇ ಪುಟ ನೋಡಿ )

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
## ತಿರುಚಾನೂರು

### ಅರ್ಜಿತ ಸೇವಾ ವಿವರ

| | | | | |
|---|---|---|---|---|
| 1. | ದರ್ಶನ: | ವಿಶೇಷ ಪ್ರವೇಶಃ ಪ್ರತಿಯೊಬ್ಬರಿಗೆ | ರೂ | 2–00 |
| 2. | ಅರ್ಜಿತ: | ಕಾಲಸೋಲ 1) ಪೊಂಗಲ್ | ರೂ | 55–00 |
| | | 2) ಪುಳಿಯೋಗರೆ | ರೂ | 50–00 |
| | | 3) ದಧ್ಯೋದನ | ರೂ | 40–00 |
| | | 4) ಕೇಸರಿಬಾತ್ | ರೂ | 85–00 |
| | | 5) ಸಕ್ಕರೆ ಪೊಂಗಲ್ | ರೂ | 65–00 |
| | | 6) ದೋಸೆ | ರೂ | 35–00 |
| | | 7) ಶಾಕರಬಾತ್ | ರೂ | 90–00 |
| | | 8) ಸೀರಾ | ರೂ | 155–00 |
| 3. | ಸೇವೆಗಳು: | 1) ನಿತ್ಯ ಅರ್ಚನೆ ಒಂದು ವರ್ಷಕ್ಕೆ | ರೂ | 150–00 |
| | | 2) ಸಹಸ್ರನಾಮಾರ್ಚನೆ | ರೂ | 6–50 |
| | | 3) ಅರ್ಚನೆ | ರೂ | 1–00 |
| | | 4) ಆರತಿ | ರೂ | 0–50 |
| | | 5) ಪೂರಾಭಿಷೇಕ (ಶುಕ್ರವಾರಗಳಲ್ಲಿ) | ರೂ | 100–00 |
| | | 6) ಊಂಜಲ್ ಸೇವೆ ( ,, ಸಂಜೆ) | ರೂ | 150–00 |
| | | 7) ತಿರುಚ್ಚಿ ಉತ್ಸವ | ರೂ | 63–00 |
| | | 8) ಗಜವಾಹನ | ರೂ | 32–00 |

—ಪೇಷ್ಕಾರ್

# ಪುಸ್ತಕ ವಿಮರ್ಶೆ

## "ಸ್ತುತ್ಯ ಪ್ರಯತ್ನ"

## ವಿಜಯದಾಸರ ಪಾದ ನಿಜವಾಗಿ ನಂಬಲು . . .

**ವಿಜಯದಾಸರ ಪಾದ ನಿಜವಾಗಿ ನಂಬಲು**

ಲೇಖಕರು :
ಸೀತಾರಾಮದಾಸ

ಪ್ರಕಾಶಕರು :
ಶ್ರೀಮತಿ ಲಕ್ಷ್ಮೀಬಾಯಿ
ನಂ. 388 : 6 ಮೇನ್ ರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – 560019

ಬೆಲೆ : ರೂ. 4-00

ಸುಮಾರು ಮೂರು ಶತಮಾನಗಳ ಹಿಂದೆ ಕರ್ನಾಟಕದಲ್ಲಿ ಬಾಳಿ ಬೆಳಗಿದ ಶ್ರೇಷ್ಠ ಹರಿದಾಸರಾದ 'ವಿಜಯದಾಸರು' ಕಲ್ಲೂರಿನ ಸುಧಾಪಾಠಕ ಪಂಡಿತ ಸುಬ್ಬಣ್ಣಾಚಾರ್ಯರನ್ನು ಉದ್ಧರಿಸಿದ ಪ್ರಸಂಗವೇ ಈ ಕಿರುನಾಟಕದ ವಸ್ತು. ಅಹಂ ಮಮಕಾರಾದಿ ಬಂಧನಗಳಿಂದ ನಿಶ್ಚೇಷ್ಟಿತರಂತಾಗಿದ್ದ ಸುಖಜೀವಿ ಸುಬ್ಬಣ್ಣಾಚಾರ್ಯರಲ್ಲಿ ವಿಜಯದಾಸರ ಕರುಣೆಯ ಅಮೃತ ಬಿಂದುವು ವಿಶಿಷ್ಟ ಜೀವಶಕ್ತಿಯನ್ನು ತುಂಬಿ ಅವರನ್ನು ಉತ್ತಮ ಹರಿದಾಸರನ್ನಾಗಿ ಪರಿವರ್ತಿಸಿದ ಪರಿಯನ್ನು ಈ ನಾಟಕದಲ್ಲಿ ಕಾಣಿಸುವ ಪ್ರಯತ್ನ ನಡೆಸಿದ್ದಾರೆ 'ಸೀತಾರಾಮದಾಸ' ಅಂಕಿತನಾಮದ ಲೇಖಕ ವಿ. ಶ್ರೀನಿವಾಸಮೂರ್ತಿ.

ಸುಮಾರು ಮೂರು ಶತಮಾನಗಳ ಹಿಂದೆ ನಡೆದ ಈ ಘಟನೆಯನ್ನು ವಿವರಿಸಲು ಲೇಖಕರು, ವರ್ತಮಾನಕಾಲದ ದೃಶ್ಯದೊಂದಿಗೆ, ಆಧುನಿಕ Flash back ತಂತ್ರವನ್ನು ಅಳವಡಿಸಿ ಕೊಂಡು ಪ್ರಾರಂಭಿಸಿದ್ದಾರೆ. ವ್ಯಾಸವಿಠಲ ವಿರಚಿತ 'ಶ್ರೀವಿಜಯದಾಸರ ಸ್ತೋತ್ರ'ದೊಂದಿಗೆ ನಾಟಕದ ಆರಂಭ. 'ಶ್ರೀ ವಿಜಯದಾಸ ಭಕ್ತಮಂಡಲಿ'ಯ ಮುಖಂಡರೊಬ್ಬರು ಸಭಿಕರಿಗೆ ಈ ಪ್ರಸಂಗವನ್ನು ದೃಶ್ಯಾವಳಿಗಳ ಮೂಲಕ ವಿವರಿಸುವಂತೆ ಚಿತ್ರಿಸಿದ್ದಾರೆ ಲೇಖಕರು. ಮೂಲ ವಸ್ತುವಿಗೆ ಪೂರಕವಾಗಿದೆ ಇಲ್ಲಿ ಬರುವ ಘಟನೆಗಳು ಮತ್ತು ಸಂಭಾಷಣೆಗಳು. ಪಾತ್ರಗಳಲ್ಲಿ ಸಹಜತೆ ಮತ್ತು ನಿರಾಡಂಬರತೆಗಳಿವೆ.

ಮಾನವಿ ಸೀಮೆಯ ಕಲ್ಲೂರಿಗೆ ಸುಧಾಪಾಠಕ ಪಂಡಿತ ಸುಬ್ಬಣ್ಣಾಚಾರ್ಯರ ಸುಧಾಪ್ರವಚನ ಮಂಗಳ ಮಹೋತ್ಸವಕ್ಕೆ ಹೊರಟ ದಂಪತಿಗಳು, ಕಲ್ಲೂರಿಗೆ ಸಮೀಪದ ಅಡವಿಯಲ್ಲಿ ತಂಗಿದ್ದ ದಂಪತಿಗಳೊಂದಿಗೆ ಕೂಡಿಕೊಂಡು ಕಲ್ಲೂರಿಗೆ ಮುಂದುವರೆಯುತ್ತಾರೆ. ಮಂಗಳದಿನಕ್ಕೆ ನಡೆಯುತ್ತಿದ್ದ ಸಿದ್ಧತೆಗಳು, ಸುಬ್ಬಣ್ಣಾಚಾರ್ಯರ ಗುಣಗಾನ, ಸುಬ್ಬಣ್ಣಾಚಾರ್ಯರ ಪಂಡಿತ ನಿಷ್ಠೆ, ದಾಸರು, ದಾಸರ ಪದಗಳೆಂದರೆ ತಿರಸ್ಕಾರ, ಅಡಿಗೆಯವರಿಲ್ಲದೆ, ಶ್ಲೋಕದ ಅರ್ಥ ತಿಳಿಯದೆ ಚಿಂತಾಕ್ರಾಂತರಾಗಿದ್ದ ಆಚಾರ್ಯರನ್ನು, ದೇವರು ಆಪತ್ತಿಗೊದಗುವನೆಂದು ಹೆಂಡತಿ ಸಂತೈಸುವಿಕೆ ಅಡಿಗೆಯವನ ವೇಷದಲ್ಲಿ ವಿಜಯದಾಸರ ಆಗಮನ, ಮುಖ ನೋಡಿ ಮಣೆ ಹಾಕುವ ಸ್ವಭಾವದ ಸುಬ್ಬಣ್ಣಾಚಾರ್ಯರು ಅವನನ್ನು ಅನುಮಾನಿಸುವುದು, ಸುಬ್ಬಣ್ಣಾಚಾರ್ಯರ ಹೆಂಡತಿ ಆತನಿಗೆ ಅಡಿಗೆ ಕೆಲಸ ಒಪ್ಪಿಸಿಕೊಟ್ಟದ್ದು, ಸುಬ್ಬಣ್ಣಾಚಾರ್ಯರ ವ್ಯಕ್ತಿತ್ವವನ್ನು ಹೊರಗೆಡಹುತ್ತವೆ.

ಸಭೆಯಲ್ಲಿ ದಾಸಪ್ಪ ನಡೆಸಿದ ಪವಾಡ, ಜುಂಬನ ಮೂಲಕ ಶ್ಲೋಕದ ಅರ್ಥವನ್ನು ಹೊರಡಿಸಿದ್ದು, ಇದರಿಂದ ಜಾಗ್ರತರಾದ ಆಚಾರ್ಯರು ದಾಸಪ್ಪನ ಕಾಲಿಗೆ ಬಿದ್ದು ಕ್ಷಮಾಯಾಚನೆ ಮಾಡಿದ್ದು, ಸಭಿಕರಲ್ಲೊಬ್ಬ ದಾಸಪ್ಪನ ವೇಷದಲ್ಲಿದ್ದ ವಿಜಯದಾಸರನ್ನು ಗುರುತಿಸಿದ್ದು, ಆಚಾರ್ಯರ ಪಶ್ಚಾತ್ತಾಪ, ಆದವಾನಿ ದಿವಾನ ತಿಮ್ಮಣ್ಣದಾಸರ (ವೇಣುಗೋಪಾಲದಾಸ) ಆಗಮನ, ಸುಬ್ಬಣ್ಣಾಚಾರ್ಯರಿಂದ ಗುರುಪಾದಪೂಜೆ–ಗಳು ಸುಲಲಿತವಾಗಿ ನಿರೂಪಿಸಲ್ಪಟ್ಟಿವೆ. ಆಚಾರ್ಯರು ವಿಜಯದಾಸರಿಂದ 'ವ್ಯಾಸ ವಿಠಲ' ನೆಂಬ ಅಂಕಿತ ಪಡೆದು ಹರಿದಾಸರಾಗುವರು. ಗೆಜ್ಜೆ ಕಟ್ಟಿಕೊಂಡು ತಂಬೂರಿ ಹಿಡಿದು ನರ್ತಿಸುವರು. ವಿಜಯದಾಸರಿಂದ ಆಚಾರ್ಯ ದಂಪತಿಗಳು ಆಶೀರ್ವಾದ ಭಾಗ್ಯ ಪಡೆದದ್ದು, ಸುಮಂಗಲಿಯರಿಂದ ಆರತಿ. ನೇಪಥ್ಯದಲ್ಲಿ ಸಮಾರಾಧನೆ – ಇವೇ ಮೊದಲಾದ ಘಟನಾವಳಿಗಳಿಂದ ಕೂಡಿದೆ ಈ ನಾಟಕ.

ಸುಮಾರು 50 ಕ್ಕೂ ಮೇಲ್ಪಟ್ಟು ಪಾತ್ರಗಳಿಂದ ಕೂಡಿದೆ ನಾಟಕ. ಇದರಲ್ಲಿ ಮುಖ್ಯ ಪಾತ್ರಧಾರಿಗಳಾದ ಸುಬ್ಬಣ್ಣಾಚಾರ್ಯರು ಮತ್ತು ದಾಸಪ್ಪನವರು – ಈ ಎರಡು ಪಾತ್ರಗಳಿಗೆ ಕೂಡು ಸೇತುವೆಯಂತಿದೆ ಆಚಾರ್ಯರ ಹೆಂಡತಿಯ ಪಾತ್ರ. ಪಾತ್ರೋಚಿತವಾದ ಸಂಭಾಷಣೆಗಳಿಂದ ಕೂಡಿದೆ ವೈದಿಕ ಕುಟುಂಬಗಳ ನಡೆ ನುಡಿಗಳ ಸ್ಪಷ್ಟ ಚಿತ್ರಣವಿದೆ. ರಾಯಚೂರು ಪ್ರದೇಶದ ಭಾಷೆಯ ಸೊಗಡನ್ನು ಈ ನಾಟಕದಲ್ಲಿ ಸಹಜವಾಗಿ ಕಾಣಬಹುದು.

ಹರಿದಾಸ ಪಾರಮ್ಯತೆಯನ್ನು ಎತ್ತಿ ಹಿಡಿಯಲಾಗಿದೆ. ನಾಟಕದ ಉದ್ದಕ್ಕೂ ಶಾಂತರಸ ಮತ್ತು ಭಕ್ತಿ ರಸದ ಸೆಲೆಗಳನ್ನು ಕಾಣಬಹುದು. ಆಸ್ತಿಕರಿಗೆ ಹೃದ್ಯವಾಗಿದೆ ಈ ಕೃತಿ. ದೃಶ್ಯ ಕಾವ್ಯವಾದ ನಾಟಕದಲ್ಲಿ ಪ್ರಮುಖವಾಗಿ ಎರಡು ವಿಭಾಗಗಳಿವೆ (1) ನೋಡುನಾಟಕ (2) ಕೇಳುನಾಟಕ ಪ್ರಸ್ತುತ ನಾಟಕವು ಎರಡನೆಯ ಗುಂಪಿಗೆ ಸೇರುತ್ತದೆ. ★

**ಶ್ರೀ ಕೆ. ಎಸ್. ರಾಮಮೂರ್ತಿ**

( 34ನೇ ಪುಟದಿಂದ )

ಆಗ ಸಿಂಹವು "ರಾಜನೇ ನೀನು ಇಡೀ ಭೂ ಮಂಡಲದ ಅಧಿಪತಿ. ನೀನು ಸತ್ತರೆ ಬದುಕುಳಿಯುವುದು ಈ ಒಂದು ಹಸು ಮಾತ್ರ. ನೀನು ಬದುಕಿದರೆ ಪ್ರಜೆಗಳನ್ನೆಲ್ಲಾ ಕಾಪಾಡಬಹುದಲ್ಲವೇ? ಈ ಹಸುವನ್ನು ಕೊಂದುದಕ್ಕಾಗಿ ಗುರುಗಳು ಕೋಪಿಸಿಕೊಳ್ಳುವುದಾದರೆ ಲಕ್ಷಾಂತರ ಹಸುಗಳನ್ನು ನೀಡಿ ಅವರ ಕೋಪವನ್ನು ತಣಿಸುವ ಸಾಮರ್ಥ್ಯ ನಿನಗಿದೆ" ಎಂದಿತು.

"ಎಲೈ ಸಿಂಹವೇ, ಕಷ್ಟಕ್ಕೆ ಸಿಕ್ಕಿದವರನ್ನು ಕಾಪಾಡುವುದು ಕ್ಷತ್ರಿಯರ ಧರ್ಮ. ಬೇರೆ ಹಸುಗಳನ್ನು ನೀಡಿ ಗುರುಗಳ ಕೋಪವನ್ನು ತಣಿಸುವುದು ಅಸಾಧ್ಯ. ಶಿವನ ಪೂತನಾದ ಸಾಮರ್ಥ್ಯದಿಂದ ಇವರ ಮೇಲೆ ಎರಗಿದೆ. ಇಲ್ಲವಾದರೆ ಇವರ ಸಮೀಪ ಬರಲೂ ನಿನಗೆ ಸಾಧ್ಯವಾಗುತ್ತಿರಲಿಲ್ಲ. ಆದುದರಿಂದ ನನ್ನನ್ನು ತಿಂದು ಈ ಗೋವನ್ನು ಉಳಿಸು. ಒಂದು ಕಡೆ ಸೇರಿ ಮಾತನಾಡುವುದರಿಂದ ಸ್ನೇಹವಾಗುವುದೆಂದು ಹಿರಿಯರು ಹೇಳುತ್ತಾರೆ. ಅದರಂತೆ ನಮ್ಮೊಳಗೆ ಈಗ ಸ್ನೇಹವುಂಟಾಗಿದೆ. ನಿನ್ನ ಸ್ನೇಹಿತನಾದ ನನ್ನ ಬೇಡಿಕೆಯನ್ನು ನೆರವೇರಿಸು" ಎಂದು ರಾಜನು ಹೇಳಿದನು. ಸಿಂಹವು "ಹಾಗೆಯೇ ಆಗಲಿ" ಎಂದು ನಂದಿನಿಯನ್ನು ಬಿಟ್ಟಿತು. ರಾಜನು ಸಿಂಹದ ಬಳಿಗೆ ಹೋಗಿ ಅದರ ಮುಂದೆ ತಲೆ ಬಾಗಿಸಿ ಅದು ತನ್ನ ಮೇಲೆ ಬೀಳುವುದನ್ನೇ ನಿರೀಕ್ಷಿಸಿ ನಮ್ರವಾಗಿ ಕುಳಿತನು.

ಆದರೆ ಸಿಂಹವು ಅವನ ಮೇಲೆ ಬೀಳಲಿಲ್ಲ. ಬದಲಾಗಿ ಆಕಾಶದಿಂದ ದೇವತೆಗಳು ಸುರಿಸಿದ ಹೂಗಳು ಬಿದ್ದವು. ರಾಜನು ಬೆರಗಾಗಿ ನೋಡಲು ಸಿಂಹವು ಅಲ್ಲಿರಲಿಲ್ಲ. "ಮಗನೇ ಏಳು" ಎಂಬ ಧ್ವನಿ ಕೇಳಿಸಿತು. ನಂದಿನಿ ಎದುರು ನಿಂತಿತ್ತು. "ಎಲೈ ದಿಲೀಪನೇ, ಈ ಸಿಂಹ ಮಾಯೆಯಿಂದಾದುದು ನಿನ್ನ ಭಕ್ತಿಯ ಪರೀಕ್ಷೆಗಾಗಿ ಈ ಘಟನೆ ನಡೆಯಿತು. ನೀನು ನನ್ನಲ್ಲಿ ಭಕ್ತಿ, ಕರುಣೆಯನ್ನು ತೋರಿರುವೆ. ನಿನ್ನನ್ನು ಮೆಚ್ಚಿರುವೆ. ನಿನಗೆ ಬೇಕಾದ ವರವನ್ನು ಕೇಳು ಕೊಡುವೆನು' ಎಂದಿತು.

ದಿಲೀಪನು ನಂದಿನಿಗೆ ನಮಸ್ಕರಿಸಿ, "ತಾಯಿ, ಸೂರ್ಯವಂಶವನ್ನು ಬೆಳಗುವವನೂ, ಧರ್ಮನಿಷ್ಠನೂ ಆದ ಪುತ್ರನನ್ನು ಸುದಕ್ಷಿಣೆಯಲ್ಲಿ ಹುಟ್ಟುವಂತೆ ಅನುಗ್ರಹಿಸು" ಎಂದು ಕೇಳಿದನು. "ಹಾಗೆಯೇ ಆಗಲಿ, ನೀನು ದೊನ್ನೆಯಲ್ಲಿ ನನ್ನ ಹಾಲನ್ನು ಕರೆದು ಕುಡಿ, ನಿನ್ನ ಇಷ್ಟ ನೆರವೇರುವುದು." ಎಂದಿತು.

ಆಶ್ರಮಕ್ಕೆ ಬಂದೊಡನೆಯೇ ತನಗೆ ನಂದಿನಿಯ ಅನುಗ್ರಹವಾದ ಸಂಗತಿಯನ್ನು ಗುರುಗಳಿಗೂ ತನ್ನ ಪತ್ನಿಗೂ ತಿಳಿಸಿದನು. ಕರು ಹಾಲು ಕುಡಿದ ನಂತರ ಉಳಿದ ಹಾಲನ್ನು ಹೋಮಕ್ಕೆ ತೆಗೆದಿಟ್ಟು ಮತ್ತೆ ಉಳಿದ ಹಾಲನ್ನು ರಾಜನು ಸ್ವೀಕರಿಸಿದನು. ವಶಿಷ್ಟರು ರಾಜನಿಗೆ ಸುಪುತ್ರನು ಜನಿಸುವಂತೆ ಆಶೀರ್ವದಿಸಿದರು.

ದಿಲೀಪನಿಗೆ ಮುಂದೆ ಜನಿಸಿದ ಮಗುವೇ 'ರಘು' ಮುಂದೆ ಅವನ ವಂಶ 'ರಘು ವಂಶ' ಎಂದು ಖ್ಯಾತವಾಯಿತು.

ದಿಲೀಪನು ತನ್ನ ಕರ್ತವ್ಯ ನಿಷ್ಠೆ, ತ್ಯಾಗದ ಮನೋಭಾವ ಇವುಗಳಿಂದ ಕೀರ್ತಿವಂತನಾದ, ದೊಡ್ಡ ಪದವಿಯಲ್ಲಿದ್ದೂ ಜೀವನ ಹೇಗೆ ಇರಬೇಕೆಂದು ದಿಲೀಪನು ಆಚರಿಸಿ ತೋರಿಸಿದ. ಎಂದಿಗೂ ನೆನಪಿನಲ್ಲಿಡಲು ಯೋಗ್ಯವಾದ ಚರಿತ್ರೆಯುಳ್ಳ ಮಹಾಪುರುಷನೆನಿಸಿದ.

---

# ಗಡಿಯಾರ ಮತ್ತು ಕಾಲ

ಗಡಿಯಾರದಂಗಡಿಗೆ ಗಡಿಯಾರವೊಂದನ್ನು ಕೊಳ್ಳಲು
ನಾನೊಮ್ಮೆ ಹೋಗಿದ್ದೆ–ಯಾವುದರತ್ತ ತಿರುಗಿದರೂ
ಐದೋ ಹತ್ತೋ ನಿಮಿಷ ಹಿಂದು ಅಥವಾ ಮುಂದು
ಯಾವುದೂ ನಿಂತಿಲ್ಲ – ಎಲ್ಲೆಲ್ಲೂ ಟಿಕ್, ಟಿಕ್, ಟಿಕ್ ............
ಕೆಲವಂತೂ ಕಾಲುಗಂಟೆಗೆ, ಅರ್ಧಗಂಟೆಗೆ, ಮುಕ್ಕಾಲುಗಂಟೆಗೆ
ತಾಸು ತಾಸಿಗೆ– ಸ-ರಿ-ಗ-ಮ ಬಾರಿಸಿ; ಒಂದು ಎರಡು ಮೂರು ...........
ಬಾರಿಸುತ್ತ ತಮ್ಮಿರವನ್ನು ಸಾರಿ, ಕಾಲಸರಿಯುವುದನ್ನು ತೋರಿ
ತಮ್ಮ "ಅಹರ್ನಿಶಂ ಸೇವಾಮಹೇ" ತತ್ತ್ವವನ್ನು ಸಾರುತ್ತಿವೆ
ಆದರೂ, ಯಾವುದರದ್ದು ಸರಿ ಯಾವ ಸಮಯ?
ಅಂಗಡಿಯವನೊಡನೆ "ಇದು ಹೇಗೆ?" ಎಂದೊಂದನ್ನೆತ್ತಿ ಕೇಳಲು
"ನೀವು ಕೊಳ್ಳುವುದಾದರೆ ಅಜೆಸ್ಟ್ ಮಾಡಿ ಕೊಡುತ್ತೇನೆ
ಒಂದು ವರ್ಷದ ಗ್ಯಾರಂಟಿಯೂ ಇದೆ," – ಎಂದ
ಯಾವ ಗಡಿಯಾರಕ್ಕೂ ಇದೇ ನಾಂದಿ, ಕೊಳ್ಳುವಿಕೆಗೆ ಮುನ್ನ
ಸರಿ, ಹಾಗಾದರೆ ಪ್ರತಿಯೊಂದಕ್ಕೂ ಹಿಂದು, ಮುಂದಿನ ಬಾಧೆ;
ಅಜೆಸ್ಟಿನ ಸೌಲಭ್ಯ! – ಆದರೆ,
ಯಾವುದನ್ನು ನೋಡಿ, ಎಷ್ಟು ಅಜೆಸ್ಟ್ ಮಾಡಬೇಕು?
ಇದೇ ಯಕ್ಷ ಪ್ರಶ್ನೆ! – ಕಾಲಾಯ ತಸ್ಮೈ ನಮಃ

— **ಕೆ. ಸುಬ್ರಹ್ಮಣ್ಯ ಭಟ್ಟ** ಎಂ. ಎ; ಬಿ. ಎಡ್;

---

# ವಾರ್ತಾಲಹರಿ

## ಪುಸ್ತಕ ಪ್ರಕಟನೆ

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮಾರಾವ್ ಅವರು ಶ್ರೀಸಾಮಾನ್ಯರಿಗಾಗಿ ತಿ. ತಿ. ದೇ. ಧರ್ಮ ಸಂಸ್ಕೃತಿಗಳ ಬಗ್ಗೆ ಮಾಡುತ್ತಿರುವ ಪುಸ್ತಕ ಪ್ರಕಟನೆಯನ್ನು ಶ್ಲಾಘಿಸಿದರು.

ಕಥಾ ಸರಿತ್ಸಾಗರ, ರಾಮಚರಿತ ಮಾನಸ, ಪ್ರಾರ್ಥನಾ ಭಾಗವತ (ತೆಲುಗು) ಮಹಾಭಾರತ, ತಿ. ತಿ. ದೇ ಉದ್ಯಾನ ವನವಿಭಾಗ (ಆಂಗ್ಲ) ಪುಸ್ತಕಗಳನ್ನು ಅವರು ಬಿಡುಗಡೆ ಮಾಡುತ್ತಿದ್ದರು. ತತ್ಸಂಬಂಧದಲ್ಲಿ ಏರ್ಪಡಿಸಲಾಗಿದ್ದ ಪುಸ್ತಕ ಪ್ರದರ್ಶನವನ್ನೂ ಅವರು ನೋಡಿ ಮೆಚ್ಚುಗೆ ವ್ಯಕ್ತಪಡಿಸಿದರು.

ಕಾರ್ಯ ನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿಯವರು ಬೆಳೆಯುತ್ತಿರುವ ಬೇಡಿಕೆಗಳಿಗೆ ಅನುಗುಣವಾಗಿ ತಿ. ತಿ. ದೇ. ಮುದ್ರಣಾಲಯವನ್ನು ಹೆಚ್ಚು ಹೆಚ್ಚು ಆಧುನೀಕರಣಗೊಳಿಸಲಾಗುತ್ತಿದೆ ಎಂದು ವಿವರಿಸಿದರು. ಪೌರ ಸಂಬಂಧ ಶಾಖಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ ಅವರು ಧಾರ್ಮಿಕ ಸಾಹಿತ್ಯವನ್ನು ಹೊರತರುವಲ್ಲಿ ತಿ. ತಿ. ದೇ. ಹೊಂದಿರುವ ವಿವಿಧ ಯೋಜನೆಗಳ ಬಗ್ಗೆ ವಿವರ ನೀಡಿದರು.



ಪುಸ್ತಕಗಳನ್ನು ಬಿಡುಗಡೆ ಮಾಡುತ್ತಿರುವ ಶ್ರೀ ಎನ್. ಟಿ. ರಾಮಾರಾವ್. ಎಡಗಡೆಯಿಂದ ಶ್ರೀ ವಿದ್ವಾನ್ ವಿಶ್ವಂ ಹಾಗೂ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ.

## ಅನ್ನಮಾಚಾರ್ಯ ವರ್ಧಂತಿ ಉತ್ಸವಗಳು

ಶ್ರೀ ವೆಂಕಟೇಶ್ವರಸ್ವಾಮಿಯ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ವರ್ಧಂತಿ ಉತ್ಸವಗಳು ಕಳೆದ ಏಪ್ರಿಲ್ 10 ರಿಂದ 12 ರ ವರೆಗೆ ಸರಳವಾಗಿಯೂ, ಸಂಭ್ರಮ ಪೂರ್ಣವಾಗಿಯೂ ತಿರುಪತಿ ಅನ್ನಮಾಚಾರ್ಯ ಕಲಾಮಂದಿರದಲ್ಲಿ ನಡೆದವು.

ತಿ. ತಿ. ದೇ. ಆಡಳಿತ ಕೇಂದ್ರದಿಂದ ಶ್ರೀ ವೆಂಕಟೇಶ್ವರ ಸ್ವಾಮಿ ಹಾಗೂ ಅನ್ನಮಾಚಾರ್ಯರ ಚಿತ್ರಗಳನ್ನು ಮೆರವಣಿಗೆಯಲ್ಲಿ ಅನ್ನಮಾಚಾರ್ಯ ಕಲಾಮಂದಿರಕ್ಕೆ ತರುವುದರಿಂದ ಆರಂಭವಾದ ವರ್ಧಂತಿ ಉತ್ಸವದಲ್ಲಿ ದಿನಾಂಕ 10 ರಂದು ಅಖಂಡ ಆರಾಧನೆಯೂ ನಡೆದು ಅಸಂಖ್ಯ ಭಕ್ತರೂ ನೆರೆದಿದ್ದರು. ಅಂದು ಸಂಜೆ ನಡೆದ ಶ್ರೀ ಮೇಡಸಾನಿ ಮೋಹನ್ ಅವರ ಅಷ್ಟಾವಧಾನ ಕಾರ್ಯಕ್ರಮ, ಡಾ॥ ಮದ್ದೂರಿ ಸುಬ್ಬಾರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಪೃಚ್ಛಕರಾಗಿ ಡಾ॥ ಎಸ್. ಬಿ. ರಘುನಾಥಾಚಾರ್ಯ (ನಿಷಿದ್ಧಾಕ್ಷರಿ) ಡಾ॥ ಪಿ. ರಾಧಾಕೃಷ್ಣ ಶರ್ಮ ( ನ್ಯಸ್ತಾಕ್ಷರಿ ) ಕುಮಾರಿ ಭಾಸ್ಕರ ಸ್ವರ್ಣಾಂಬ (ದತ್ತಪದಿ) ಶ್ರೀ ಜಯಚಂದ್ರಾರೆಡ್ಡಿ (ಅಪ್ರಸ್ತುತ ಪ್ರಶಂಸೆ) ಶ್ರೀ ಶ್ರೀ ಪಿ. ವಿ. ಶ್ರೀನಿವಾಸ ಮೂರ್ತಿ (ಸಮಸ್ಯಾ ಪೂರಣ) ಶ್ರೀ ಸಮುದ್ರಾಲ ಲಕ್ಷ್ಮಣಯ್ಯ (ಕಾವ್ಯ ಪಠಣ) ಶ್ರೀ ರಾವುಲ ಸೂರ್ಯನಾರಾಯಣಮೂರ್ತಿ (ಆಶುಕವಿತ್ವ) ಶ್ರೀ ಹೆಚ್ಚಿ (ಗಂಟೆ) ಅವಧಾನವನ್ನು ನಡೆಸಿದರು.

ಅಂದು ರಾತ್ರಿ ನಡೆದ ಸಾಹಿತ್ಯ ಸಭೆಯು ಶ್ರೀ ಡಿ. ಸುಬ್ಬರಾಯುಲು ಅವರ ಅಧ್ಯಕ್ಷತೆಯಲ್ಲಿ ನಡೆಯಿತು ಡಾ॥ ಜೆ ಚೆನ್ನಾರೆಡ್ಡಿ ಅವರು ಅನ್ನಮಾಚಾರ್ಯ ಆಧ್ಯಾತ್ಮ ಸಂಕೀರ್ತನೆಗಳ ಬಗ್ಗೆಯೂ ಡಾ॥ ಸರ್ವೋತ್ತಮನ್ ಅವರು ಕವಿಯ ಭಕ್ತಿಯ ಸ್ವರೂಪದ ಬಗ್ಗೆಯೂ, ಮಾತನಾಡಿದರು.. ನಂತರ ಶ್ರೀ ಪಶುಪತಿ ಯವರ ಸಂಗೀತ, ಶ್ರೀ ಬಾಲಕೃಷ್ಣ ಪ್ರಸಾದ್ ಅವರ ವೃಂದದ ಲಲಿತ ಸಂಗೀತ ಕಾರ್ಯಕ್ರಮಗಳಿದ್ದವು.

ಎರಡನೆಯದಿನ ಬೆಳಗ್ಗೆ ಕುಮಾರಿ ಜಿ. ಕೃಷ್ಣ ಕುಮಾರಿ ಅವರ ಹರಿಕಥೆ, ಸಂಜೆ ಶ್ರೀ ಪುದುಕ್ಕೋಟೆ ರಾಮನಾಥನ್ ಅವರ ವಯೋಲಿನ್ ಕಚೇರಿ ನಡೆದವು. ಅಂದು ರಾತ್ರಿ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ ಅವರ ಅಧ್ಯಕ್ಷತೆಯಲ್ಲಿ ನಡೆದ ಸಾಹಿತ್ಯ ಸಭೆಯಲ್ಲಿ ಶ್ರೀ ಆರ್. ಎ. ಜಯಂತ, ಶ್ರೀ ಕೋದಂಡ ರಾಮಕೃಷ್ಣ, ಡಾ॥ ಕೆ. ವಾಣಿ, ಶ್ರೀ ಜಿ. ಬಾಲಸುಬ್ರಹ್ಮಣ್ಯಂ ಉಪನ್ಯಾಸ ಮಾಡಿದರು. ನಂತರ ಶ್ರೀ ಕೆ ಆರ್ ಗಣಪತಿ ಅವರ ವೇಣುವಾದನ, ಶ್ರೀಮತಿ ಅರುಂಧತಿ ಸರ್ಕಾರ್ ವೃಂದದವರ ಸಂಗೀತ ಕಚೇರಿಗಳು ನಡೆದವು.

12 ರಂದು ಬೆಳಗ್ಗೆ ಶ್ರೀ ಕೆ. ಆರ್. ಕೃಷ್ಣ ಅವರ ವೀಣಾ ಕಚೇರಿ, ಸಂಜೆ ಶ್ರೀಮತಿ ಜಾನಕಿ ರಮಣ ಅವರ ಸಂಗೀತ ಸಭೆ ನಡೆದವು. ಅಂದು ರಾತ್ರಿ ಡಾ॥ ಪಿ. ರಾಧಾಕೃಷ್ಣ ಶರ್ಮ ಅವರ ಅಧ್ಯಕ್ಷತೆಯಲ್ಲಿ ನಡೆದ ಸಾಹಿತ್ಯ ಸಭೆಯಲ್ಲಿ ಶ್ರೀ ಗೌರಿಪೆದ್ದಿ ರಾಮಸುಬ್ಬಶರ್ಮ ಅವರು ಅನ್ನಮಯ್ಯನ ಕವಿ ಹೃದಯವನ್ನು ಪ್ರಶಂಸಿಸಿ, ಅನ್ನಮಾಚಾರ್ಯರ ಜೀವನವನ್ನು ವಿವರಿಸಿದರು.

ಅಂದಿನ ರಾತ್ರಿ ನಡೆದ ಸಂಗೀತ ಕಾರ್ಯಕ್ರಮದಲ್ಲಿ ಶ್ರೀ ಎಂ. ವಿ. ರಮಣ ಮೂರ್ತಿ, ಶ್ರೀ ಪಿ. ಸೂರ್ಯರಾವು ವೃಂದದವರಿಂದ ಸಂಗೀತ ಸಭೆಗಳು ನಡೆದವು. ಶ್ರೀಮತಿ ಇಂದಿರಾ ಕಾಮೇಶ್ವರ ರಾವ್ ಅವರ ವೃಂದದ ಸಂಗೀತ ಸಭೆಯಿಂದ ವರ್ಧಂತಿ ಉತ್ಸವಗಳು ಮುಗಿತಾಯ ಹೊಂದಿದವು.

ಸ್ವಾಮಿ, ಕಪಿಲತೀರ್ಥ, ಶ್ರೀನಿವಾಸಮಂಗಾಪುರ, ಅಲಮೇಲು ಮಂಗಾಪುರ ದೇವಾಲಯಗಳನ್ನು ಸುತ್ತಿಕೊಂಡು 51 ಕಿ. ಮೀ. ದೂರ ಹಾದು ಉಚಿತ ಸತ್ರಗಳಿಗೆ ವಾಪಸ್ ಬರುತ್ತದೆ. 4 ಗಂಟೆಯಲ್ಲಿ ತಿರುಪತಿಯ ಬಳಿಯ ಐದೂ ದೇವಾಲಯಗಳನ್ನೂ ದರ್ಶಿಸಿ ಬರುವ ಈ ಸೌಲಭ್ಯದಲ್ಲಿನ ಟಿಕೆಟ್ ಬೆಲೆ ಪ್ರತಿ ಒಬ್ಬರಿಗೆ 12 ರೂ. ಮಕ್ಕಳಿಗೆ 6 ರೂ ಮಾತ್ರವಿದ್ದು ಈ ಟಿಕೆಟ್‌ನಲ್ಲಿಯೇ ಆಯಾ ದೇವಾಲಯಗಳಲ್ಲಿನ ವಿಶೇಷ ಪ್ರವೇಶದ ದರವೂ ಸೇರಿರುತ್ತದೆ.

ಯಾತ್ರಿಕರಿಗೆ ಕಾಲವನ್ನೂ ಶ್ರಮವನ್ನೂ ಉಳಿಸುವ ಉದ್ದೇಶದಿಂದ ತಿ. ತಿ. ದೇ. ಯೋಜಿಸಿರುವ ಈ ಸ್ಥಳೀಯ ಬಸ್ ಸೌಕರ್ಯವನ್ನು ದಿನಾಂಕ 7–3–83 ರಂದು ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ ಕುಮಾರಸ್ವಾಮಿ ರೆಡ್ಡಿ ಅವರು ಉದ್ಘಾಟಿಸಿದರು.

ಮುಂದಿನ ಸಂಚಿಕೆಯಲ್ಲಿ .... .... .

**ಸಪ್ತಗಿರಿ ಜೂನ್ — 1983**

**ವಿಜಯದಾಸರ ಸುಳಾದಿಗಳು**
– ಡಾ ॥ ಕೆ. ಗೋಕುಲನಾಥ್

**ಭಕ್ತಿಯ ವೈಭವ**
– ಡಾ ॥ ಕೆ. ಕೃಷ್ಣಮೂರ್ತಿ

**ತ್ಯಾಗರಾಜರ ಸಂಸ್ಕೃತ ಕೃತಿಗಳಲ್ಲಿ ಭಕ್ತಿ**
– ಡಾ ॥ ವಿ. ಎಸ್. ಸಂಪತ್ಕುಮಾರಾಚಾರ್ಯ

**ಆಂಜನೇಯ**
– ಡಾ ॥ ಎನ್. ಅನಂತರಂಗಾಚಾರ್

**ಗಾಂಗೇಯರಡಿದಾವರೆಯಲ್ಲಿ**
– ವಿದ್ವಾನ್ ಬ. ನ. ಗುಂಡೂರಾವ್

**ಭಕ್ತ ಶಿರೋಮಣಿ ಸುಧನ್ವ**
– ಕೆ ರಮಾನಂದ, ಎಂ.ಎ,

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

**1983**

## ಜೂನ್ ತಿಂಗಳಿನ ಮುಖ್ಯದಿನಗಳು

| | | |
|---|---|---|
| 1 | ಬುಧವಾರ | ನಾರಾಯಣವನಂ ಕಲ್ಯಾಣ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಸಮಾಪ್ತಿ. |
| 6 | ಸೋಮವಾರ | ಹನುಮಜ್ಜಯಂತಿ. |
| 15 | ಬುಧವಾರ | ಮಿಥುನ ಸಂಕ್ರಮಣ |
| 21 | ಮಂಗಳವಾರ | ತಿರುಚಾನೂರು ಪದ್ಮಾವತೀ ಅಮ್ಮನವರ ತೆಪ್ಪೋತ್ಸವಾರಂಭ. |
| 25 | ಶನಿವಾರ | ತಿರುಚಾನೂರು ಪದ್ಮಾವತೀ ಅಮ್ಮನವರ ತೆಪ್ಪೋತ್ಸವ ಸಮಾಪ್ತಿ. |

## ನನ್ನಯ ಜಯಂತಿ

ತಿ. ತಿ. ದೇ. ಹಿಂದೂ ಧರ್ಮ ರಕ್ಷಣ ಸಂಸ್ಥೆ ಹಾಗೂ ಧಾರ್ಮಿಕ ವಿದ್ಯಾ ಕೇಂದ್ರಗಳ ಆಶ್ರಯದಲ್ಲಿ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಏಪ್ರಿಲ್ 19 – 20 ರಂದು ತೆಲುಗಿನ ಆದಿಕವಿ ನನ್ನಯ ಜಯಂತಿ ಉತ್ಸವಗಳು ಯಶಸ್ವಿಯಾಗಿ ನಡೆದವು

19 ರಂದು ಸಂಜೆ ತಿ ತಿ. ದೇ. ಸಹ ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ ಸುಬ್ಬರಾಯುಲು ಅವರು ಆರಂಭಿಸಿದ ಜಯಂತಿ ಉತ್ಸವದಲ್ಲಿ ಆಚಾರ್ಯ ದಿವಾಕರ್ಲ ವೆಂಕಟಾವಧಾನಿ ಅವರು ನನ್ನಯನ ವೈದಿಕ ಧರ್ಮವನ್ನು ಕುರಿತೂ ಡಾ। ಜಿ ಹೇಮಲತ ಅವರು ನನ್ನಯನ ಸೂಕ್ತಿಗಳಲ್ಲಿನ ನಾನಾರುಚಿರಾರ್ಥವನ್ನು ಕುರಿತೂ ಮಾತನಾಡಿದರು. ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿಯವರು ನನ್ನಯನ ಮಹಾಭಾರತವನ್ನು ವಾಚಿಸಿದರು.

20 ರಂದು ಸಂಜೆ ಆಚಾರ್ಯ ಎಲ್ಲಂರಾಜು ಶ್ರೀನಿವಾಸರಾವ್ ಅವರು 'ನನ್ನಯ – ಅಕ್ಷರ ರಮ್ಯತೆ' ಎಂಬ ಬಗ್ಗೆ ಉಪನ್ಯಾಸ ನೀಡಿದರು. ಶ್ರೀಮಲ್ಲಾದಿ ಚಂದ್ರಶೇಖರ ಶಾಸ್ತ್ರಿಯವರು ಪುರಾಣವಾಚನ ಮಾಡಿದರು.

ಅಂದು ನಡೆದ ಸಭೆಯಲ್ಲಿ ಕಾಲೇಜು ವಿದ್ಯಾರ್ಥಿಗಳಿಗಾಗಿ ಏರ್ಪಡಿಸಲಾದ "ನನ್ನಯ – ಕವಿತಾ ತತ್ತ್ವ" ಪ್ರಬಂಧ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿದವರಿಗೆ ಬಹುಮಾನ ವಿನಿಯೋಗ ಮಾಡಲಾಯಿತು. ಮೂರು ಪ್ರಥಮ ಬಹುಮಾನಗಳನ್ನು ಪಡೆದವರೆಂದರೆ ಕುಮಾರಿ ಆರ್. ವಿಜಯ (ಶ್ರೀ ಪದ್ಮಾವತೀ ಕಲಾಶಾಲೆ) ಶ್ರೀ ಎಂ. ವಿ. ರಾಮನಾಥ್ (ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯ) ಎಂ ರಮೇಶ್. (ಶ್ರೀ ವೆಂಕಟೇಶ್ವರ ಜೂನಿಯರ್ ಕಾಲೇಜು) ಐವತ್ತ ನಾಲ್ಕು ಮಂದಿ ಭಾಗವಹಿಸಿದ್ದ ಈ ಸ್ಪರ್ಧೆಯಲ್ಲಿ ಮೇಲ್ಕಂಡವರಿಗೆ ಬೆಳ್ಳಿಯ ಪದಕಗಳನ್ನೂ ಮಿಕ್ಕವರಿಗೆ ತಿ. ತಿ. ದೇ ಧಾರ್ಮಿಕ ಕೃತಿಗಳನ್ನೂ ನೀಡಲಾಯಿತು.

ಬಹುಮಾನ ವಿನಿಯೋಗ ಮಾಡಿದ ತಿ. ತಿ. ದೇ ಟ್ರಸ್ಟ್ ಬೋರ್ಡ್ ಸದಸ್ಯೆ ಶ್ರೀಮತಿ ಎನ್. ರಾಜಕುಮಾರಿ ಅವರು ಮಾತನಾಡುತ್ತ, ಹಿಂದೂ ಧರ್ಮದ ಪ್ರಸಾರದಲ್ಲಿ ಪ್ರಾಮಾಣಿಕ ಪ್ರಯತ್ನಗಳು ಆಗಬೇಕಾದ ಅಗತ್ಯವನ್ನು ಅವಧಾರಿಸಿ ಹೇಳುತ್ತ, ವೈಜ್ಞಾನಿಕ ತಳಹದಿಯಲ್ಲಿ ಹಿಂದೂ ಧರ್ಮ ವಿಕಾಸವಾಗಬೇಕಾದ ಅಗತ್ಯವನ್ನು ಕುರಿತೂ ವಿವರಿಸಿದರು. ಹಿಂದೂ ಧರ್ಮ ಸಂಸ್ಥೆಯ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರು ವಂದನಾರ್ಪಣೆ ಮಾಡಿದರು.



Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501·

